**ವ್ಯಾಖ್ಯಾನವಿಶೇಷ-** ಇಲ್ಲಿ ಏಷ ಎಂಬುದು ಸಂಭುದ್ಯಂತಪದ. ಇದರ ಅರ್ಥವನ್ನು ಹೀಗೆ ತಿಳಿಯಬಹುದು. 'ಇಷು ಇಚ್ಛಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾದ ಏಷ ಶಬ್ದವು ಇಚ್ಛಾರೂಪನಾದ ಭಗವಂತನನ್ನು ಹೇಳಿಕೊಡುತ್ತದೆ. ಈ ಪಕ್ಷದಲ್ಲಿ ಶ್ಲೋಕದ ಅರ್ಥ ಹೀಗಿದೆ. ಹೇ ಏಷ-ಇಚ್ಛಾರೂಪನಾದ ಶ್ರೀಹರಿಯೇ ತವ-ನಿಮ್ಮ ಏತೇಷಾಂ-ಈ ಪಾದಪಾಂಸುಗಳನ್ನು ಸಂಸ್ತವೇ-ಸ್ತೋತ್ರಮಾಡಲು ಶಕ್ತಃ-ಸಮರ್ಥನು ನಾಸ್ಮಿ-ಅಲ್ಲ. ಹಾಗಾದರೆ ಪಾದಪಾಂಸುಗಳು ಸ್ತುತ್ಯರ್ಹ ಅಲ್ಲವೇ ಎಂಬ ಶಂಕೆಗೆ ಜನ್ಮಾದಿ ಇತ್ಯಾದಿ ಷಷ್ಠ್ಯಂತಪದಗಳಿಂದ ಪೂರ್ವಪಾಪಗಳಿಗೆ ನಾಶವನ್ನು ಉತ್ತರಪಾಪಕ್ಕೆ ಅಶ್ಲೇಷವನ್ನು ಕೊಡುತ್ತವೆ ಎಂಬ ಅರ್ಥವನ್ನು ಮಾಡಬಹುದು. ಈ ರೀತಿ ವ್ಯಾಖ್ಯಾನ ಮಾಡುವ ಮೂಲಕ 'ಓಂ ತದಧಿಗಮಉತ್ತರಪೂರ್ವಾಘಯೋಃ ಅಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ' ಎಂಬ ಸೂತ್ರದ ಅಭಿಪ್ರಾಯವನ್ನು ಇಲ್ಲಿ ತಿಳಿಸಲಾಗಿದೆ.

ಚಿರಮುದಿತಚಿದಾನಂದಸಂದೋಹದಾನಾಂ-'ಏಕಾಂತಾನಾಂ ನ ಕಸ್ಯಚಿತ್ । ಅರ್ಥೋ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್' । ಎಂದು ಹೇಳಿದಂತೆ ನಿತ್ಯದಲ್ಲಿ ಅಭಿವ್ಯಕ್ತವಾದ ಜ್ಞಾನಾನಂದಾದಿಗುಣಗಳನ್ನು ನೀಡುವ ಶ್ರೀಹರಿಯನ್ನು ಕೊಡುವಂತಹ ಎಂದು ಹೇಳುವದರಿಂದ ಏಕಾಂತಭಕ್ತರು ಮೋಕ್ಷಾಭಿಲಾಷೆ ಇಲ್ಲದೇ ಭಗವಂತನನ್ನು ಆರಾಧನೆ ಮಾಡುತ್ತಾರೆ ಹೀಗೆ ಹರಿವಾಯುಗುರುಗಳ ಪಾದಪಾಂಸುವು ಏಕಾಂತಭಕ್ತರಿಗೆ ಭಗವತ್ಪ್ರಾಪ್ತಿರೂಪವಾದ ಫಲವನ್ನು ಕೊಡುತ್ತದೆ ಎಂದು ಹೇಳಿದಂತೆ ಆಯಿತು.

ಅಸ್ಯಾವಿಷ್ಕರ್ತುಕಾಮಂ ಕಲಿಮಲಕಲುಷೇಽಸ್ಮಿನ್ ಜನೇ ಜ್ಞಾನಮಾರ್ಗಂ
ವಂದ್ಯಂ ಚಂದ್ರೇಂದ್ರರುದ್ರದ್ಯುಮಣಿಫಣಿವಯೋನಾಯಕಾದ್ಯೈರಿಹಾದ್ಯ ।
ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ ಕೃತವತೋ ಮಾರುತಸ್ಯಾವತಾರಂ
ಪಾತಾರಂ ಪಾರಮೇಷ್ಠ್ಯಂ ಪದಮಪವಿಪದಃ ಪ್ರಾಪ್ತುರಾಪನ್ನಪುಂಸಾಮ್ ॥ 4 ॥

ಅದ್ಯ-ಈಗ ಇಹ-ಈ ಭೂಮಿಯಲ್ಲಿ ಕಲಿಮಲಕಲುಷೇ-ಕಲಿಕಾಲದಿಂದ ಬಂದಂತಹ ಅನ್ಯಥಾಜ್ಞಾನದಿಂದ ಕಲುಷಿತವಾದ ಅಸ್ಮಿನ್-ಪ್ರತ್ಯಕ್ಷಸಿದ್ಧರಾದ, (ಜ್ಞಾನಹೊಂದಲು ಯೋಗ್ಯರಾದ)ಜನೇ-ಜನರಲ್ಲಿ ಜ್ಞಾನಮಾರ್ಗಮ್- ತತ್ತ್ವಜ್ಞಾನಮಾರ್ಗವನ್ನು ಆವಿಷ್ಕರ್ತುಕಾಮಮ್-ಪ್ರಕಟಮಾಡಲು ಇಚ್ಛೆಯುಳ್ಳ ಚಂದ್ರೇಂದ್ರರುದ್ರದ್ಯುಮಣಿಫಣಿ-ವಯೋನಾಯಕಾದ್ಯೈಃ-ಚಂದ್ರ, ಇಂದ್ರ, ರುದ್ರ, ಸೂರ್ಯ, ಶೇಷ, ಗರುಡ ಮೊದಲಾದವರಿಂದ ವಂದ್ಯಮ್-ನಮಸ್ಕರಿಸಲ್ಪಡುವ ಮಂತ್ರಸಿದ್ಧಮ್-ಬಳಿತ್ಥಾದಿ ಮಂತ್ರಗಳಲ್ಲಿ ಪ್ರಸಿದ್ಧವಾದ ಮಧ್ವಾಖ್ಯಮ್-ಮಧ್ವ ಎಂಬ ಹೆಸರುಳ್ಳ ಅವತಾರಂ-ಅವತಾರವನ್ನು ಅದ್ಯ-ಈಗ ಇಹ-ಇಲ್ಲಿ ಕೃತವತಃ-ಮಾಡಿದಂತಹ ಆಪನ್ನಪುಂಸಾಂ-ಆಪತ್ತಿಗೊಳಗಾದ (ಶರಣಾಗತರಾದ) ಪುರುಷರ ಪಾತಾರಂ-ರಕ್ಷಕರಾದ

ಪಾರಮೇಷ್ಠ್ಯಮ್-ಬ್ರಹ್ಮದೇವರ ಸಂಬಂಧಿಯಾದ ಪದಮ್-ಪದವಿಯನ್ನು ಪ್ರಾಪ್ತುಃ-ಹೊಂದಲು ಯೋಗ್ಯರಾದ ಅಸ್ಯ ಮಾರುತಸ್ಯಾವತಾರಮ್-ವಾಯುದೇವರ ಅವತಾರ-ಸಂಭೂತರಾದ ಮಧ್ವಾಚಾರ್ಯರನ್ನು (ಏಷೋಽಹಂ-ಈ ನಾನು ಸಂಸ್ತವೇ-ಸ್ತೋತ್ರ ಮಾಡಲು ನಾಸ್ಮಿ ಶಕ್ತಃ-ಸಮರ್ಥನಲ್ಲ) ಇತಿ ಕಿಮುತ-ಎಂದು ಏನು ಹೇಳುವುದು ?

ಭಾವಾರ್ಥ- ಕಲಿಯ ಸ್ವರೂಪವಾದ ಮಿಥ್ಯಾಜ್ಞಾನದಿಂದ ಭ್ರಾಂತರಾದ ಯೋಗ್ಯ-ಜೀವರಿಗೆ ತತ್ತ್ವಜ್ಞಾನದ ದಾರಿಯನ್ನು ತೋರಿಸಲು ಬಯಸಿ ಭಾವಿ ಬ್ರಹ್ಮರಾದ ವಾಯು-ದೇವರು ಇಂದಿಲ್ಲಿ ಅವತಾರ ತಾಳಿದ್ದಾರೆ. ಈ ಅವತಾರವನ್ನು ಚಂದ್ರ-ಸೂರ್ಯ-ಇಂದ್ರ-ರುದ್ರ-ಶೇಷ-ಗರುಡಾದಿದೇವತೆಗಳೆಲ್ಲ ಪ್ರಾರ್ಥಿಸುತ್ತಾರೆ. ಬಳಿ ಬರುವ ಜನರನ್ನು ಪೊರೆವ ಈ ಅವತಾರವನ್ನು ವೇದಗಳು ಮಧ್ವ ಎಂದು ಹೊಗಳುತ್ತವೆ. ಇಂಥ ವಾಯುದೇವರನ್ನು ಪೊಗಳಲು ನಾನು ಸಮರ್ಥನಲ್ಲ ಎಂದೇನು ಹೇಳುವುದು.

**ವ್ಯಾಖ್ಯಾನವಿಶೇಷ-** 1. ಮಧ್ವಾಖ್ಯಂ-'ಮಧ್ವಿತ್ಯಾನಂದ ಉದ್ದಿಷ್ಟ' ಎಂಬ ತೈತ್ತರೀಯ ಭಾಷ್ಯವಚನಾನುಸಾರವಾಗಿ ಮಧು ಶಬ್ದವು ಆನಂದವಾಚಕವು. ಖ್ಯಾಧಾತುವಿನಿಂದ ನಿಷ್ಪನ್ನವಾದ ಆಖ್ಯಾ ಶಬ್ದವು ಖ್ಯಾತಾದಿ ಶಬ್ದಗಳಂತೆ ಜ್ಞಾನವಾಚಕವಾಗಿದೆ. ಅಂದರೆ ಮಧ್ವಾಖ್ಯಂ ಎಂಬ ಪದಕ್ಕೆ ಆನಂದ ಹಾಗೂ ಜ್ಞಾನಪೂರ್ಣರು ಎಂದು ಅರ್ಥ.

2. ಪಾರಮೇಷ್ಠ್ಯಮ್- ಪರಮೇ ತಿಷ್ಠತಿ ಇತಿ ಪರಮೇಷ್ಠೀ । ಪರಮೇಷ್ಠಿನಃ ಇದಂ ಪಾರಮೇಷ್ಠ್ಯಮ್ । ಭಗವಂತನ ಸ್ಥಾನವಾದ ವೈಕುಂಠಾದಿಗಳಲ್ಲಿ ಇರುವವರು. 'ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ' ಎಂಬ ವಚನಾನುಸಾರವಾಗಿ ವಾಯುದೇವರು ಬ್ರಹ್ಮಪದವಿಯನ್ನು ಹೊಂದುವವರು ಎಂಬುದನ್ನೂ ಇಲ್ಲಿ ತಿಳಿಯ-ಬಹುದಾಗಿದೆ.

ಉದ್ಯದ್ವಿದ್ಯುತ್ಪ್ರಚಂಡಾಂ ನಿಜರುಚಿನಿಕರವ್ಯಾಪ್ತಲೋಕಾವಕಾಶೋ
ಬಿಭ್ರದ್ಭೀಮೋ ಭುಜೇ ಯೋಽಭ್ಯುದಿತದಿನಕರಾಭಾಂಗದಾಢ್ಯಪ್ರಕಾಂಡೇ ।
ವೀರ್ಯೋದ್ಧಾರ್ಯಾಂ ಗದಾಗ್ರ್ಯಾಮಯಮಿಹ ಸುಮತಿಂ ವಾಯುದೇವೋ
ವಿದಧ್ಯಾದಧ್ಯಾತ್ಮಜ್ಞಾನನೇತಾ ಯತಿವರಮಹಿತೋ ಭೂಮಿಭೂಷಾಮಣಿರ್ಮೇ
॥ 5 ॥

ಯಃ-ಯಾವ ಭೀಮಃ ಸನ್-ಭೀಮಸೇನದೇವರಾಗಿ ಅಭ್ಯುದಿತದಿನಕರಾಭಾಂಗ ದಾಢ್ಯಪ್ರಕಾಂಡೇ-ಅಭ್ಯುದಿತ-ಉದಯಿಸುವ ದಿನಕರ-ಸೂರ್ಯನಂತೆ ಆಭಾ-ಪ್ರಕಾಶ-ಮಾನವಾದ ಅಂಗದಾಢ್ಯ-ತೊಳುಬಂದಿ ತೊಟ್ಟಿರುವ ಪ್ರಕಾಂಡೇ-ತೋಳುಳ್ಳ ಭುಜೇ-ಭುಜದಲ್ಲಿ ವೀರ್ಯೋದ್ಧಾರ್ಯಾಂ-ಕೇವಲ ಬಲಶಾಲಿಗಳಿಂದ ಎತ್ತಲಾಗುವಂಥಹ ಉದ್ಯದ್ವಿದ್ಯುತ್ಪ್ರಚಂಡಾಂ-ಉದ್ಯತ್-ಉದಯಿಸುವ ವಿದ್ಯುತ್-ಮಿಂಚಿನಂತೆ ಪ್ರಚಂಡಾಂ-ಮಹತ್ತರ ಕಾಂತಿಯಿಂದ ಕೂಡಿದ ಗದಾಗ್ರ್ಯಾಂ-ಶ್ರೇಷ್ಠಗದೆಯನ್ನು ಬಿಭ್ರತ್-ಧರಿಸಿದ

ನಿಜರುಚಿನಿಕರವ್ಯಾಪ್ತ-ಲೋಕಾವಕಾಶಃ-ನಿಜ-ತಮ್ಮ ರುಚಿ-ಸಹಜ ತೇಜಸ್ಸಿನ ನಿಕರ-ಸಮೂಹದಿಂದ ವ್ಯಾಪ್ತಲೋಕಾವಕಾಶಃ-ಜಗದೊಳಗೆಲ್ಲ ವ್ಯಾಪಿಸಿದ ಅಧ್ಯಾತ್ಮಜ್ಞಾನನೇತಾ-ಆಧ್ಯಾತ್ಮತತ್ತ್ವಜ್ಞಾನವನ್ನು ನೀಡುವ ಯತಿವರಮಹಿತಃ-ಯತಿವರ-ಯತಿಶ್ರೇಷ್ಠರಿಂದ ಮಹಿತಃ-ಪೂಜೆಗೊಳ್ಳುವ ಭೂಮಿಭೂಷಾಮಣಿಃ-ಭೂಮಿಯನ್ನು ಅಲಂಕರಿಸುವ ರತ್ನದಂತೆ ಇರುವ ಅಯಂ ವಾಯುದೇವಃ-ಈ ವಾಯುದೇವರು (ಮಧ್ವಾಚಾರ್ಯರು) ಇಹ-ಇಂದಿಲ್ಲಿ ಮೇ-ನನಗೆ ಸುಮತಿಂ-ಉತ್ತಮವಾದ ಬುದ್ಧಿಯನ್ನು ವಿದಧ್ಯಾತ್-ಕರುಣಿಸಲಿ.

**ಭಾವಾರ್ಥ-** ಭೀಮನಾಗಿ ಜನಿಸಿದಾಗ ತಮ್ಮ ಸಹಜ ತೇಜಸ್ಸಿನಿಂದ ಜಗದೊಳಗೆಲ್ಲ ಮೀರಿ ಮೆರೆದರು. ಉದಯಿಸುವ ರವಿಯಂತೆ ಕೊರೈಸುವ ತೋಳಬಂದಿ ತೊಟ್ಟಿರುವ ತೋಳುಳ್ಳ ದಷ್ಟಪುಷ್ಟವಾದ ಭುಜದಲ್ಲಿ ಶ್ರೇಷ್ಠಗದೆಯನ್ನು ಧರಿಸಿದರು. ಮಿಂಚಿನಂತೆ ಪ್ರಚಂಡವಾದ ಆ ಗದೆಯು ಕೇವಲ ಬಲಶಾಲಿಗಳಿಂದ ಎತ್ತಲಾಗುವಂಥದ್ದು. ಹೀಗೆ ಭೀಮರೂಪ ಧರಿಸಿದ ಈ ವಾಯುದೇವರು ಇಂದಿಲ್ಲಿ ಯತಿಗಳಿಂದ ಪೂಜೆಗೊಳ್ಳುವ ಯತಿವರ್ಯರಾಗಿದ್ದಾರೆ. ಆಧ್ಯಾತ್ಮತತ್ತ್ವಜ್ಞಾನವನ್ನು ನೀಡಲು ಮುಂದಾಗಿದ್ದಾರೆ. ಭೂಮಿಯನ್ನು ಅಲಂಕರಿಸುವ ರತ್ನವಾಗಿದ್ದಾರೆ. ಆ ವಾಯುದೇವರು ನನಗೆ ಸದ್ಬುದ್ಧಿಯನ್ನು ಕರುಣಿಸಲಿ.

ಸಂಸಾರೋತ್ತಾಪನಿತ್ಯೋಪಶಮದಸದಯಸ್ನೇಹಹಾಸಾಂಬುಪೂರ-<br>
ಪ್ರೋದ್ಯದ್ವಿದ್ಯಾನವದ್ಯದ್ಯುತಿಮಣಿಕಿರಣಶ್ರೇಣಿಸಂಪೂರಿತಾಶಃ ।<br>
ಶ್ರೀವತ್ಸಾಂಕಾಧಿವಾಸೋಚಿತತರಸರಲಃ ಶ್ರೀಮದಾನಂದತೀರ್ಥ-<br>
ಕ್ಷೀರಾಂಭೋಧಿರ್ವಿಭಿಂದ್ಯಾದ್ಭವದನಭಿಮತಂ ಭೂರಿ ಮೇ ಭೂತಿಹೇತುಃ॥ 6 ॥

ಸಂಸಾರೋತ್ತಾಪನಿತ್ಯೋಪಶಮದಸದಯಸ್ನೇಹಹಾಸಾಂಬುಪೂರಪ್ರೋದ್ಯದ್ ವಿದ್ಯಾನವದ್ಯದ್ಯುತಿಮಣಿಕಿರಣಶ್ರೇಣಿಸಂಪೂರಿತಾಶಃ-ಸಂಸಾರೋತ್ತಾಪ-ಸಂಸಾರವೆಂಬ ಮಹಾತಾಪಕ್ಕೆ ನಿತ್ಯೋಪಶಮದ-ಶಾಶ್ವತವಾಗಿ ಉಪಶಾಂತಿ ನೀಡುವ, ಸದಯ-ಕರುಣೆ ತೋರುವ, ಸ್ನೇಹಹಾಸಾಂಬುಪೂರ-ಪ್ರೀತಿ ಮಾಡುವ ಮಂದಹಾಸವೆಂಬ ನೀರಿನಿಂದ ಪ್ರೋದ್ಯದ್ವಿದ್ಯಾ-ಹೊರಹೊಮ್ಮುವ ವಿದ್ಯೆಗಳೆಂಬ ಅನವದ್ಯದ್ಯುತಿ-ನಿಷ್ಕಳಂಕ ಹೊಳಪಿನ ಮಣಿಕಿರಣಶ್ರೇಣಿ-ರತ್ನಗಳು ತನ್ನ ಕಾಂತಿಯ ತರಂಗಗಳಿಂದ ಸಂಪೂರಿತಾಶಃ-ಎಲ್ಲರ ಆಸೆಗಳೆಂಬ ದಿಕ್ಕುಗಳನ್ನು ವ್ಯಾಪಿಸಿರುವ ಶ್ರೀವತ್ಸಾಂಕಾಧಿವಾಸೋಚಿತತರಸರಲಃ-ಎದೆಯಲ್ಲಿ ಶ್ರೀವತ್ಸಚಿಹ್ನೆಯುಳ್ಳ ಶ್ರೀಹರಿಯ ಸನ್ನಿಧಾನಕ್ಕೆ ಅತ್ಯಂತ ಯೋಗ್ಯರಾದವರಲ್ಲಿ ಶ್ರೇಷ್ಠರಾದ ಮೇ-ನನಗೆ ಭೂತಿಹೇತುಃ-ಭಾಗ್ಯದ ಬೀಜವಾದ ಶ್ರೀಮದಾನಂದತೀರ್ಥಕ್ಷೀರಾಂ-ಭೋಧಿಃ-ಶ್ರೀಮದಾನಂದತೀರ್ಥ-ಶ್ರೀಮದಾನಂದತೀರ್ಥರೆಂಬ ಕ್ಷೀರಾಂಭೋಧಿಃ-ಕ್ಷೀರಸಾಗರವು ಭವದನಭಿಮತಂ-ಈಗಿರುವ ಮುಂದೆ ಬರಲಿರುವ ಎಲ್ಲ ನನ್ನ ಅನಿಷ್ಟಗಳನ್ನು ವಿಭಿಂದ್ಯಾತ್-ಕಳೆಯಲಿ.

**ಭಾವಾರ್ಥ**-ಎದೆಯಲ್ಲಿ ಶ್ರೀವತ್ಸಚಿಹ್ನೆಯನ್ನು ಧರಿಸಿದ ಶ್ರೀಹರಿಯ ಸನ್ನಿಧಾನಕ್ಕೆ ಅತ್ಯಂತ ಯೋಗ್ಯರಾದ ಶ್ರೀಮದಾನಂದತೀರ್ಥರು ನಿಜವಾದ ಕ್ಷೀರಸಾಗರ. ಸಂಸಾರದ ಘೋರ ಬವಣೆಗಳನ್ನು ಶಾಶ್ವತವಾಗಿ ಕೊನೆಗಾಣಿಸುವ, ಕರುಣೆ ತೋರುವ, ಪ್ರೀತಿ ಮಾಡುವ ಇವರ ಮಂದಹಾಸವೇ ಈ ಸಮುದ್ರಕ್ಕೆ ಸಮೃದ್ಧವಾದ ನೀರು. ಇಲ್ಲಿ ಹೊರಹೊಮ್ಮುವ ವಿದ್ಯೆಗಳೆಂಬ ನಿಷ್ಕಳಂಕ ಹೊಳಪಿನ ರತ್ನಗಳು ತನ್ನ ಕಾಂತಿ ತರಂಗಗಳಿಂದ ಎಲ್ಲರ ಆಸೆಗಳೆಂಬ ದಿಸೆ(ದಿಕ್ಕು)ಗಳನ್ನು ತುಂಬುತ್ತಿವೆ. ಈ ಕ್ಷೀರಸಾಗರವು ನನಗೆ ಭಾಗ್ಯದ ಬೀಜವಾಗಲಿ. ಈಗಿರುವ ಮುಂದೆ ಬರಬಹುದಾದ ಎಲ್ಲ ಅನಿಷ್ಟಗಳನ್ನು ಪರಿಹರಿಸಲಿ.

ಮೂರ್ಧನ್ಯೇಷೋಽಂಜಲಿರ್ಮೇ ದೃಢತರಮಿಹ ತೇ ಬಧ್ಯತೇ ಬಂಧಪಾಶ-
ಚ್ಛೇತ್ರೇ ದಾತ್ರೇ ಸುಖಾನಾಂ ಭಜತಿ ಭುವಿ ಭವಿಷ್ಯದ್ವಿಧಾತ್ರೇ ದ್ಯುಭರ್ತ್ರೇ ।
ಅತ್ಯಂತಂ ಸಂತತಂ ತ್ವಂ ಪ್ರದಿಶ ಪದಯುಗೇ ಹಂತ ಸಂತಾಪಭಾಜಾ-
ಮಸ್ಮಾಕಂ ಭಕ್ತಿಮೇಕಾಂ ಭಗವತ ಉತ ತೇ ಮಾಧವಸ್ಯಾಥ ವಾಯೋಃ ॥ 7 ॥

ಭುವಿ-ಭೂಮಿಯಲ್ಲಿ ಭಜತಿ-ಭಜಿಸುವವರ ಬಂಧಪಾಶಚ್ಛೇತ್ರೇ- ಸಂಸಾರಪಾಶವನ್ನು ಕತ್ತರಿಸುವ ಸುಖಾನಾಂ-ಸುಖಗಳನ್ನು ದಾತ್ರೇ-ಕೊಡುವ ಭವಿಷ್ಯದ್ವಿಧಾತ್ರೇ-ಭಾವಿಬ್ರಹ್ಮ-ರಾದ ದ್ಯುಭರ್ತ್ರೇ-ಭಾರತಿದೇವಿಯರಿಗೆ ಒಡೆಯರಾದ ತೇ-ನಿಮಗೆ ಮೇ-ನನ್ನ ಏಷಃ-ಈ ಅಂಜಲಿಃ-ಅಂಜಲಿಯು (ಕೈಗಳು) ಮೂರ್ಧನಿ-ತಲೆಯ ಮೇಲೆ ಸಂತತಂ-ಸದಾಕಾಲ ಅತ್ಯಂತಂ-ಅತ್ಯಂತವಾಗಿ ಬಧ್ಯತೇ-ಜೋಡಿಸಲ್ಪಡುತ್ತಿದೆ. (ಕೈಗಳನ್ನು ತಲೆಯ ಮೇಲೆ ಜೋಡಿಸುತ್ತಿದ್ದೇನೆ.) ಅಥ-ನಂತರ ಇಹ-ಸಂಸಾರದಲ್ಲಿ ಸಂತತಂ-ನಿರಂತರವಾಗಿ ಅತ್ಯಂತಂ-ಮಿತಿಮೀರಿ ಸಂತಾಪಭಾಜಾಂ-ಸಂತಾಪ ಹೊಂದಿದ ಅಸ್ಮಾಕಂ-ನಮಗೆ ಭಗವತಃ-ಷಡ್ಗುಣೈಶ್ವರ್ಯಸಂಪನ್ನನಾದ ಮಾಧವಸ್ಯ-ಲಕ್ಷ್ಮೀಪತಿಯಾದ ನಾರಾಯಣನ ಅಥ-ಮತ್ತು ವಾಯೋಃ-ವಾಯುದೇವರಾದ ತೇ-ನಿಮ್ಮ ಪದಯುಗೇ-ಎರಡೂ ಪಾದಗಳಲ್ಲಿ ಏಕಾಂ-ಮುಖ್ಯವಾದ ಭಕ್ತಿಂ-ಭಕ್ತಿಯನ್ನು ಪ್ರದಿಶ-ಕೊಡಿರಿ.

**ಭಾವಾರ್ಥ**-ವಾಯುದೇವರೇ ಭೂಮಿಯಲ್ಲಿ ನಿಮ್ಮನ್ನು ಭಜಿಸುವವರ ಸಂಸಾರದ ಬಿಗಿಯಾದ ಬಂಧನವನ್ನು ಕತ್ತರಿಸಿ ಆನಂದವನ್ನು ನೀಡುವವರು ನೀವು. ಭಾವಿಬ್ರಹ್ಮರು. ಭಾರತೀದೇವಿಗೆ ಒಡೆಯರು. ನಿಮಗಾಗಿ ನನ್ನ ಈ ಜೋಡಿಸಿದ ಕೈಗಳನ್ನು ತಲೆಯ ಮೇಲೆ ಧರಿಸುತ್ತೇನೆ. ನಿರಂತರವಾಗಿ ಮಿತಿಮೀರಿ ಸಂತಾಪ ಹೊಂದಿದ ನಮಗೆ ಲಕುಮಿಯೊಡಯನಾದ ಭಗವಂತನ ಪಾದದ್ವಂದ್ವದಲ್ಲಿ ದೃಢಭಕುತಿಯನ್ನು ಹಾಗೆಯೇ ವಾಯುದೇವರಾದ ನಿಮ್ಮ ಪಾದದ್ವಂದ್ವದಲ್ಲಿ ಭಕ್ತಿಯನ್ನು ಕರುಣಿಸಿ.

**ವ್ಯಾಖ್ಯಾನವಿಶೇಷ**-ಭಾವಪ್ರದೀಪಿಕಾಕಾರರು ದ್ಯುಭರ್ತ್ರೇ ಎಂಬ ಶಬ್ದಕ್ಕೆ ವಿದ್ಯುತ್‌ಪತಿ ಎಂದು ಅರ್ಥ ಹೇಳಿ ಅದಕ್ಕೆ ಪ್ರಮಾಣವನ್ನು ಹೀಗೆ ಕೊಟ್ಟಿದ್ದಾರೆ.

1. ದ್ಯೌರ್ವಾ ವಿದ್ಯುತ್ ತತ್ವತಿಂ ವಾಯುಮುಪಗಮ್ಯ,

2. ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ ಎಂಬ ಶ್ರುತಿಯಿದೆ. ಅದರಂತೆ ಸ್ಮೃತಿಯನ್ನು ಉದಾಹರಿಸುತ್ತಾರೆ.

1. ವಿದ್ಯುತ್ಪತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ
ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ಎಂದು.

ಸಾಭ್ರೋಷ್ಣಾಭೀಶುಶುಭ್ರಪ್ರಭಮಭಯ ನಭೋ ಭೂರಿಭೂಭೃದ್ವಿಭೂತಿ-
ಭ್ರಾಜಿಷ್ಣುರ್ಭೂರ್ಋಭೂಣಾಂ ಭವನಮಪಿ ವಿಭೋಽಭೇದಿ ಬಭ್ರೇ ಬಭೂವೇ ।
ಯೇನ ಭ್ರೂವಿಭ್ರಮಸ್ತೇ ಭ್ರಮಯತು ಸುಭೃಶಂ ಬಭ್ರುವದ್ದುರ್ಭೃತಾಶಾನ್
ಭ್ರಾಂತಿರ್ಭೇದಾವಭಾಸಸ್ತ್ವಿತಿ ಭಯಮಭಿಭೂರ್ಭೋಕ್ಷ್ಯತೋ ಮಾಯಿಭಿಕ್ಷೂನ್ ॥ 8 ॥

ಹೇ ಅಭಯ-ಭಯವನ್ನು ಕಳೆಯುವ ವಿಭೋ-ವ್ಯಾಪ್ತರಾದ ವಾಯುದೇವರೇ ತೇ-ನಿಮ್ಮ ಯೇನ-ಯಾವ ಭ್ರೂವಿಲಾಸದಿಂದ ಸಾಭ್ರೋಷ್ಣಾಭೀಶುಶುಭ್ರ ಪ್ರಭಂ-ಮೋಡಗಳಿಂದ, ಸೂರ್ಯ-ಚಂದ್ರರಿಂದ ಕೂಡಿದ ನಭಃ-ಆಕಾಶವು ಭೂರಿಭೂಭೃದ್ವಿಭೂತಿಭ್ರಾಜಿಷ್ಣುಃ-ಭೂರಿ-ಬಹಳವಾದ ಭೂಭೃತ್-ಪರ್ವತಗಳೆಂಬ ವಿಭೂತಿ-ಸಂಪತ್ತಿನಿಂದ ಭ್ರಾಜಿಷ್ಣುಃ-ಶೋಭಿಸುವ ಭೂಃ-ಭೂಮಿಯು ಋಭೂಣಾಂ ಭವನಂ-ದೇವತೆಗಳಿಗೆ ಆಶ್ರಯವಾದ ಸ್ವರ್ಗವು ಅಪಿ-ಸಹ ಅಭೇದಿ-ನಾಶಮಾಡಲ್ಪಡುತ್ತವೆ ಬಭೂವೇ-ಸೃಷ್ಟಿಸಲ್ಪಡುತ್ತವೆ ಬಭ್ರೇ-ಧರಿಸಲ್ಪಡುತ್ತವೆ ಅಂತಹ ಪ್ರಕಾಶಿಸುವ ಸ್ವಭಾವವುಳ್ಳ ಅಭಿಭೂಃ-ಶತ್ರುಗಳನ್ನು ಪರಾಭವಗೊಳಿಸುವ ತೇ ಭ್ರೂವಿಭ್ರಮಃ-ಆ ನಿಮ್ಮ ಹುಬ್ಬಿನ ವಿಲಾಸವು ಬಭ್ರುವತ್ ಬೆಕ್ಕಿನಂತೆ(ಮುಂಗುಸಿಯಂತೆ) ದುರ್ಭೃತಾಶಾನ್-ದುರಾಶೆಗಳನ್ನು ಹೊತ್ತ ಭೇದಾವಭಾಸಃ-ಈ ಭೇದದ ಅರಿವು ಭ್ರಾಂತಿಃ-ಭ್ರಮೆಯೆಂದು ಹರಟುವ ಭಯಂ-ಮುಂದೆ ಭಯಂಕರ ದುಃಖವನ್ನು ಭೋಕ್ಷ್ಯತಃ-ಅನುಭವಿಸುವ ಮಾಯಿ-ಭಿಕ್ಷೂನ್-ಮಾಯಾವಾದಿ ಭಿಕ್ಷುಗಳನ್ನು ಸುಭೃಶಮ್-ಚೆನ್ನಾಗಿ ಭ್ರಮಯತು-ಮೋಹದ ಸುಳಿಯಲ್ಲಿ ತಿರುಗಾಡಿಸುತ್ತಿರಲಿ.

**ಭಾವಾರ್ಥ**-ಭಯ ನಿವಾರಕರಾದ ಸಕಲ ಕರ್ಮಗಳನ್ನು ಮಾಡಿ ಮಾಡಿಸುವ ಮುಖ್ಯಪ್ರಾಣದೇವರೇ ಆ ನಿಮ್ಮ ಹುಬ್ಬಿನ ವಿಲಾಸವು ಮೂಲೋಕಗಳನ್ನು ಸೃಷ್ಟಿಸುತ್ತದೆ. ರಕ್ಷಿಸುತ್ತದೆ. ಸಂಹರಿಸುತ್ತದೆ. ಸೂರ್ಯಚಂದ್ರರಿಂದ ಕೂಡಿದ ಆಕಾಶ, ಪರ್ವತಗಳಿಂದ ಶೋಭಾಯಮಾನವಾದ ಭೂಮಿ, ದೇವತೆಗಳಿಗೆ ಆಸರೆಯಾದ ಸ್ವರ್ಗ ಇವೆಲ್ಲವೂ ನಿಮ್ಮ ಭ್ರೂವಿಲಾಸದಿಂದ ಕೂಡಿವೆ. ಅಂತಹ ಭ್ರೂವಿಲಾಸವು ಭೇದದ ಅರಿವು ಭ್ರಮೆಯೆಂದು ಹೇಳುವ, ಮುಂದೆ ಭಯಂಕರವಾದ ದುಃಖವನ್ನು ಅನುಭವಿಸುವ, ಮಾಯಾವಾದಿ-ಭಿಕ್ಷುಗಳನ್ನು ಮೋಹದ ಸುಳಿಯಲ್ಲಿ ಸುತ್ತುವಂತೆ ಮಾಡಲಿ.

ಯೇಽಮುಂ ಭಾವಂ ಭಜಂತೇ ಸುರಮುಖಸುಜನಾರಾಧಿತಂ ತೇ ತೃತೀಯಂ
ಭಾಸಂತೇ ಭಾಸುರೈಸ್ತೇ ಸಹಚರಚಲಿತೈಶ್ಚಾಮರೈಶ್ಚಾರುವೇಷಾಃ ।
ವೈಕುಂಠೇ ಕಂಠಲಗ್ನಸ್ಥಿರಶುಚಿವಿಲಸತ್ಕಾಂತಿತಾರುಣ್ಯಲೀಲಾ-
ಲಾವಣ್ಯಾಪೂರ್ಣಕಾಂತಾಕುಚಭರಸುಲಭಾಶ್ಲೇಷಸಮ್ಮೋದಸಾಂದ್ರಾಃ ॥ 9 ॥

ಹೇ ವಾಯುದೇವರೇ ತೇ-ನಿಮ್ಮ ಸುರಮುಖಸುಜನಾರಾಧಿತಂ-ಸುರಮುಖ-ಸುಜನ-ದೇವತೆಗಳೇ ಮೊದಲಾದ ಸಜ್ಜನರಿಂದ ಆರಾಧಿತಂ-ಆರಾಧಿತವಾದ ತೃತೀಯಂ-ಮೂರನೇ ಅಮುಂ ಭಾವಂ-ಈ ಅವತಾರವನ್ನು (ಮಧ್ವಾವತಾರವನ್ನು)ಯೇ-ಯಾರು ಭಜಂತೇ-ಸೇವಿಸುತ್ತಾರೋ ತೇ-ಅವರು ವೈಕುಂಠೇ-ವೈಕುಂಠದಲ್ಲಿ ಸಹಚರಚಲಿತೈಃ -ಸೇವಕರಿಂದ ಬೀಸಲ್ಪಡುವ ಭಾಸುರೈಃ-ಹೊಳೆಯುವ ಚಾಮರೈಃ-ಚಾಮರಗಳಿಂದ ಚಾರುವೇಷಾಃ-ಮನತಣಿಸುವ ಉಡುಪುಗಳನ್ನು ಧರಿಸಿದ ಕಂಠಲಗ್ನಸ್ಥಿರ-ಶುಚಿವಿಲಸತ್ಕಾಂತಿತಾರುಣ್ಯಲೀಲಾ- ಲಾವಣ್ಯಾಪೂರ್ಣಕಾಂತಾಕುಚಭರಸುಲಭಾ-ಶ್ಲೇಷಸಮ್ಮೋದಸಾಂದ್ರಾಃ- ಕಂಠಲಗ್ನ-ಜೋತಾಡಲು ಕೊರಳನ್ನು ಬಳಸಿದ ಸ್ಥಿರ-ಕಳೆ-ಗುಂದದ ಶುಚಿ-ಕೊಳೆಯಿಲ್ಲದೆ ವಿಲಸತ್ಕಾಂತಿ-ಕಂಗೊಳಿಸುವ ತಾರುಣ್ಯಲೀಲಾ-ತಾರುಣ್ಯದ ಹಾವಭಾವವಿಲಾಸಲಾವಣ್ಯಗಳಿಂದ ಆಪೂರ್ಣ-ತುಂಬಿ ಬಳಕುವ ಕಾಂತಾ-ನಲ್ಲೆಯರ ಕುಚಭರ-ಉಬ್ಬಿದ ಎದೆಯಿಂದ ಸುಲಭಾಶ್ಲೇಷ-ತಂತಾನೆ ಸಿಗುವ ಬಿಗಿಯಪ್ಪುಗೆಯ ಸವಿಹರ್ಷದಿಂದ ಕೂಡಿದವರಾಗಿ ಭಾಸಂತೇ-ಶೋಭಿಸುತ್ತಾರೆ.

**ಭಾವಾರ್ಥ**-ಹೇ ವಾಯುದೇವರೇ ನಿಮ್ಮ ಮೂರನೇ ಅವತಾರವನ್ನು ದೇವತೆಗಳೇ ಮೊದಲಾದ ಸಜ್ಜನರು ಆರಾಧಿಸಿದ್ದಾರೆ. ಆ ಅವತಾರವನ್ನು ಸೇವಿಸಿದವರು ವೈಕುಂಠದಲ್ಲಿ ರಾರಾಜಿಸುತ್ತಾ, ಹೊಳೆವ ಚಾಮರಗಳನ್ನು ಬೀಸುವ ಭೃತ್ಯರಿಂದ ಸೇವೆಗೊಳ್ಳುತ್ತಾ, ಮನತಣಿಸುವ ಉಡುಪುಗಳನ್ನು ತೊಡುತ್ತಾರೆ. ಕಳೆಗುಂದದೆ ಕೊಳೆಯಿಲ್ಲದ, ಕಂಗೊಳಿಸುವ ಮೈ ಬಣ್ಣ ತಾರುಣ್ಯ ಹಾವಭಾವ ವಿಲಾಸ ಲಾವಣ್ಯಗಳಿಂದ ತುಂಬಿ ಬಳಕುವ ನಲ್ಲೆಯರಿಗೆ ಜೋತಾಡಲು ಕೊರಳನ್ನು ನೀಡುತ್ತಾರೆ. ಆಗ ಅವರ ಉಬ್ಬಿದ ಎದೆಯಿಂದ ತಂತಾನೆ ಸಿಗುವ ಬಿಗಿಯಪ್ಪುಗೆಯ ಸವಿ ಹರ್ಷದಿಂದ ಹಿರಿಹಿರಿ ಹಿಗ್ಗುತ್ತಾರೆ.

ಆನಂದಾನ್ ಮಂದಮಂದಾ ದದತಿ ಹಿ ಮರುತಃ ಕುಂದಮಂದಾರನಂದ್ಯಾ-
ವರ್ತಾಮೋದಾನ್ ದಧಾನಾ ಮೃದುಪದಮುದಿತೋದ್ಗೀತಕೈಃ ಸುಂದರೀಣಾಮ್ ।
ವೃಂದೈರಾವಂದ್ಯಮುಕ್ತೇಂದ್ವಹಿಮಗುಮದನಾಹೀಂದ್ರದೇವೇಂದ್ರಸೇವ್ಯೇ
ಮೌಕುಂದೇ ಮಂದಿರೇಽಸ್ಮಿನ್ನವಿರತಮುದಯನ್ ಮೋದಿನಾಂ ದೇವದೇವ ॥ 10 ॥

ಹೇ ದೇವದೇವ-ದೇವಶ್ರೇಷ್ಠರಾದ ವಾಯುದೇವರೇ ಆವಂದ್ಯಮುಕ್ತೇಂದ್ವಹಿ-ಮಗುಮದನಾಹೀಂದ್ರದೇವೇಂದ್ರಸೇವ್ಯೇ-ಆವಂದ್ಯ-ಚೆನ್ನಾಗಿ ವಂದ್ಯರಾದ ಮುಕ್ತ-ಮುಕ್ತ-ರಾದ ಇಂದು-ಚಂದ್ರ ಅಹಿಮಗು-ಸೂರ್ಯ ಮದನ-ಕಾಮ ಅಹೀಂದ್ರ-ಶೇಷ

ದೇವೇಂದ್ರ-ದೇವೇಂದ್ರರಿಂದ ಸೇವ್ಯೇ-ಸೇವಿತರಾದ ಅಸ್ಮಿನ್ ಮೌಕುಂದೇ-ಈ ಮುಕುಂದ ಸಂಬಂಧಿಯಾದ ಮಂದಿರೇ-ವೈಕುಂಠದಲ್ಲಿ ಮೃದುಪದಮ್-ಮೃದುವಾದ ಪದಗಳಿಂದ ಕೂಡಿದ ಸುಂದರೀಣಾಮ್-ಚಲುವೆಯರ ವೃಂದೈಃ-ಸಮೂಹಗಳಿಂದ ಉದಿತೋದ್ಗೀತಕೈಃ-ಉತ್ತಮ ಹಾಡುಗಳನ್ನು ಹಾಡುವ ಅವಿರತಂ-ನಿರಂತರ ಉದಯನ್ನೋದಿನಾಂ-ನಿತ್ಯದಲ್ಲಿ ಆನಂದವುಳ್ಳ ಮುಕ್ತರಿಗೆ ಕುಂದಮಂದಾರನಂದ್ಯಾವರ್ತಾಮೋದಾನ್-ಕುಂದ-ಮಲ್ಲಿಗೆ ಮಂದಾರ-ಮಂದಾರ ನಂದಿ-ನಂದಿಬಟ್ಟಲುಗಳ ಆವರ್ತಾಮೋದಾನ್-ಸುವಾಸನೆಯನ್ನು ದಧಾನಾಃ-ಹೊತ್ತ ಮಂದಮಂದಾಃ-ಮೆಲ್ಲನೆ ಬೀಸುವ ಮರುತಃ-ಗಾಳಿಗಳು ಆನಂದಾನ್-ಹೆಚ್ಚು ಆನಂದಗಳನ್ನು ದದತಿ-ಕೊಡುತ್ತವೆ.

**ಭಾವಾರ್ಥ**-ವೈಕುಂಠದಲ್ಲಿ ಗುಂಪುಗೂಡಿದ ಚೆಲುವೆಯರು ಮಾತಾಡುವಂತೆ ಮೆಲ್ಲನೆ ಉತ್ತಮ ಹಾಡುಗಳನ್ನು ಹಾಡುತ್ತಾ ನಲಿದಾಡುತ್ತಾರೆ. ವಿಹರಿಸುತ್ತಿರುವ ಚಂದ್ರ ಸೂರ್ಯ ಇಂದ್ರ ಕಾಮ ಶೇಷಾದಿ ಮುಕ್ತಜನರನ್ನು ಆದರದಿಂದ ವಂದಿಸುತ್ತಾರೆ. ಇದು ಮುಕ್ತಿ ನೀಡುವ ವಿಷ್ಣುವಿನ ಮಂದಿರ. ಇಲ್ಲಿ ಆನಂದಸಾಗರ ನಿರಂತರವಾಗಿ ಉಕ್ಕಿಹರಿಯುತ್ತದೆ. ಓ ಪ್ರಾಣದೇವರೇ ಮಲ್ಲಿಗೆ ಮಂದಾರ ನಂದಿಬಟ್ಟಲು ಮೊದಲಾದವುಗಳ ಸುವಾಸನೆಯನ್ನು ಹೊತ್ತುಕೊಂಡು ಮೆಲ್ಲನೆ ಬೀಸುವ ನಿಮ್ಮ ತಂಗಾಳಿಗಳು ಇಲ್ಲಿ ಮೊದಲೇ ಸುಖವುಳ್ಳ ಮುಕ್ತಜನರಿಗೆ ಹೆಚ್ಚು ಸುಖವನ್ನು ಕೊಡುತ್ತವೆ.

ಉತ್ತಪ್ತಾತ್ಯುತ್ಕಟತ್ವಿಟ್ಪ್ರಕಟಕಟಕಟಧ್ವಾನಸಂಘಟ್ಟನೋದ್ಯತ್-
ವಿದ್ಯುದ್ವ್ಯೂಢಸ್ಫುಲಿಂಗಪ್ರಕರವಿಕಿರಣೋತ್ಕ್ವಾಥಿತೇ ಬಾಧಿತಾಂಗಾನ್ ।
ಉದ್ಗಾಢಂ ಪಾತ್ಯಮಾನಾ ತಮಸಿ ತತ ಇತಃ ಕಿಂಕರೈಃ ಪಂಕಿಲೇ ತೇ
ಪಂಕ್ತಿರ್ಗ್ರಾವ್ಣಾಂ ಗರಿಮ್ಣಾ ಗ್ಲಪಯತಿ ಹಿ ಭವದ್ವೇಷಿಣೋ ವಿದ್ವದಾದ್ಯ ॥ 11 ॥

ಹೇ ವಿದ್ವದಾದ್ಯ-ಹೇ ಜ್ಞಾನಿವರ್ಯರೇ ಪ್ರಕಟಕಟಕಟಧ್ವಾನ- ಸಂಘಟ್ಟನೋದ್ಯದ್ವಿದ್ಯುದ್ವ್ಯೂಢಸ್ಫುಲಿಂಗಪ್ರಕರವಿಕಿರಣೋತ್ಕ್ವಾಥಿತೇ- ಪ್ರಕಟ-ಸ್ಪಷ್ಟವಾದ ಕಟಕಕಟಧ್ವಾನಸಂಘಟ್ಟನ-ಕಟಕಟ ಎಂಬ ಧ್ವನಿಯಿಂದ ಹುಟ್ಟುವ ವಿದ್ಯುತ್-ಮಿಂಚಿನ ವ್ಯೂಢಸ್ಫುಲಿಂಗ-ಪ್ರಭೆಯುಳ್ಳ ಅಗ್ನಿಕಣಗಳ ಕಿರಣಗಳಿಂದ ಚೆನ್ನಾಗಿ ಸಂತಾಪಿಸಲ್ಪಟ್ಟ (ಬೇಯಿಸಲ್ಪಟ್ಟ) ಪಂಕಿಲೇ-ಕೆಸರು ತುಂಬಿದ ತಮಸಿ-ಕತ್ತಲೆಯ ಅಂಧಂತಮಸ್ಸಿನಲ್ಲಿ ಅತ್ಯಂತಂ-ಗಾಢವಾಗಿ ತೇ-ನಿಮ್ಮ ಕಿಂಕರೈಃ-ಭೃತ್ಯರಿಂದ ಪಾತ್ಯಮಾನಾ-ಬೀಳಿಸಲ್ಪಡುವ ಉತ್ತಪ್ತಾತ್ಯುತ್ಕಟತ್ವಿಟ್-ಉತ್ತಪ್ತ-ಅತಿಯಾಗಿ ಕಾಯಿದ ಅತ್ಯುತ್ಕಟತ್ವಿಟ್-ಕೆಂಡದಂತೆ ಅತ್ಯುಲ್ಬಣವಾದ ಕಾಂತಿಯುಳ್ಳ ಗರಿಮ್ಣಾ-ಭಾರದಿಂದ ನೋವು ನೀಡುವ ಗ್ರಾವ್ಣಾಂ-ಕಲ್ಲಿನ ಪಂಕ್ತಿಃ-ಸಾಲುಗಳು ತತ ಇತಃ-ಅತ್ತ ಇತ್ತೆಡೆಗಳಿಂದ ಬಾಧಿತಾಂಗಾನ್-ಬಾಧೆಗೊಳಗಾಗುವ ಅವಯವಗಳನ್ನುಳ್ಳವರನ್ನಾಗಿ ಮಾಡಿ ಭವದ್ವೇಷಿಣಃ-ತಮ್ಮನ್ನು ದ್ವೇಷಿಸುವವರನ್ನು ಗ್ಲಪಯತಿ-ಬಹಳವಾಗಿ ನೋಯಿಸುವವು. ಹಿ-ಪ್ರಸಿದ್ಧವು

**ಭಾವಾರ್ಥ**-ಹೇ ಜ್ಞಾನಿಶ್ರೇಷ್ಠರೇ ತಮ್ಮನ್ನು ದ್ವೇಷಿಸುವವರ ಮೇಲೆ ನಿಮ್ಮ ಭೃತ್ಯರು ಅತ್ತ ಇತ್ತ ಕಲ್ಲುಗ್ಗಳನ್ನು ಜೋರಾಗಿ ಬೀಸಿ ಎಸೆಯುತ್ತಾರೆ. ಅತಿಯಾಗಿ ಕಾದ ಕೆಂಡದಂತೆ ಮಿತಿಮೀರಿ ಕಟಕಟವೆಂದು ಚೆನ್ನಾಗಿ ಸದ್ದುಮಾಡುತ್ತಾ ಘಟ್ಟಿಸಿದಾಗ ಮಿಂಚಿನಂಥ ಕಿಡಿಯಿಂದ ಬೆಂಕಿಯ ರಾಶಿಯು ಒಟ್ಟಾಗಿ ಹುಟ್ಟಿ ಎಲ್ಲೆಡೆ ಹರಡುತ್ತಾ ಬೇಯಿಸಿ ಬೆಂಡೆತ್ತುವಂತೆ ಈ ಕೆಸರು ತುಂಬಿದ ಕತ್ತಲೆಯ ನರಕದಲ್ಲಿ ಆ ದ್ವೇಷಿಗಳ ಮೈಯನ್ನು ಪೀಡಿಸುತ್ತದೆ.

ಅಸ್ಮಿನ್ನಸ್ಮದ್ಗುರೂಣಾಂ ಹರಿಚರಣಚಿರಧ್ಯಾನಸನ್ಮಂಗಲಾನಾಂ
ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕಃ ಸ್ವರ್ಗಿಸೇವ್ಯಾಂ ಪ್ರಪನ್ನಃ ।
ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭಕ್ಲೇಶನಿರ್ಮೋಕಮಸ್ತ-
ಪ್ರಾಯಾನಂದಂ ಕಥಂಚಿನ್ನ ವಸತಿ ಸತತಂ ಪಂಚಕಷ್ಟೇತಿಕಷ್ಟೇ ॥ 12 ॥

ಅಸ್ಮದ್ಗುರೂಣಾಂ-ನಮಗೆ ಉಪದೇಶಕರಾದ ಹರಿಚರಣಚಿರಧ್ಯಾನ- ಸನ್ಮಂಗಲಾ-ನಾಮ್-ಹರಿಚರಣ-ಪರಮಾತ್ಮನ ಪಾದಗಳ ಚಿರ-ಬಹುಕಾಲ ಧ್ಯಾನ-ಧ್ಯಾನದಿಂದ ಸನ್ಮಂಗಲಾನಾಮ್-ನಷ್ಟವಾಗದ ಮಂಗಲಗಳನ್ನು ಹೊಂದಿರುವ ಧೃತರಣರಣಿಕಸ್ವರ್ಗಿ-ಸೇವ್ಯಾಂ-ಧೃತರಣರಣಿಕ-ಹತ್ತಿರಕ್ಕೆ ಹಾತೊರೆಯುತ್ತ ಬಂದು ಸ್ವರ್ಗಿಸೇವ್ಯಾಂ-ಸ್ವರ್ಗದ ದೇವತೆಗಳು ಸೇವಿಸುವ ಯುಷ್ಮಾಕಂ-ನಿಮ್ಮ ಪಾರ್ಶ್ವಭೂಮಿಂ-ಸಮೀಪಪ್ರದೇಶವನ್ನು ಪ್ರಪನ್ನೋಽಪಿ-ಹೊಂದಿದಾಗ್ಯೂ ಅಸ್ಮಿನ್-ಈ ಲೋಕದಲ್ಲಿ ಯಃ-ಯಾವನು ಉದಾಸ್ತೇ-ಉಪೇಕ್ಷೆಯನ್ನು (ಔದಾಸೀನ್ಯವನ್ನು)ಮಾಡುತ್ತಾನೆ ಸಃ-ಅವನು ಅಸ್ತಪ್ರಾಯಾನಂದಂ- ಆನಂದರಹಿತವಾದ ಅಸುಲಭಕ್ಲೇಶನಿರ್ಮೋಕಂ-ಕ್ಲೇಶಗಳಿಂದ ಮೋಕ್ಷಕಾಣದ ಅಧಿಭವಂ-ನಿತ್ಯಸಂಸಾರದಲ್ಲಿ ಆಸ್ತೇ-ನೆಲೆಸುವನು. ಅತಿಕಷ್ಟೇ-ಅತ್ಯಂತ ದುಸ್ಸಹವಾದ ಪಂಚಕಷ್ಟೇ-ಅಂಧಂತಮಸ್ಸಿನಲ್ಲಿ ಕಥಂಚಿತ್-ಹೇಗೋ ಸಂತತಂ-ನಿರಂತರವಾಗಿ ನ ವಸತಿ-ನೆಲೆಸಲಾರನು.

**ಭಾವಾರ್ಥ**-ಹೇ ವಾಯುದೇವರೇ ಶ್ರೀಹರಿಯ ಪಾದಗಳ ನಿರಂತರ ಧ್ಯಾನದಿಂದ ಶುಭಮಂಗಳಗಳನ್ನು ಹೊಂದಿರುವ ಸ್ವರ್ಗದ ದೇವತೆಗಳು ನಿಮ್ಮ ಹತ್ತಿರದಲ್ಲಿ ಬಂದು ನಿಮ್ಮನ್ನು ಸೇವಿಸುತ್ತಾರೆ. ಈಗ ನಮಗೆಲ್ಲ ಉಪದೇಶಕರಾಗಿ ಇಲ್ಲಿಯೇ ಇರುವ ನಿಮಗೆ ಹತ್ತಿರವಾದ ಸ್ಥಳದಲ್ಲೇ ಇದ್ದರೂ ಔದಾಸೀನ್ಯ ತೋರುವ ಜನರು ಈ ಸಂಸಾರದಲ್ಲಿಯೇ ಬಿದ್ದಿರುತ್ತಾರೆ. ನಿರಂತರ ಪಂಚಕಷ್ಟಗಳಿಂದ ಬಹಳ ದುಃಖಕರವಾದ ತಮಸ್ಸಿನಲ್ಲಿ ಯಾವುದೇ ರೀತಿಯಿಂದ ಬೀಳದಿದ್ದರೂ ಅವರಿಗೆ ಈ ಸಂಸಾರದಲ್ಲಿಯೇ ಕಳೆದುಕೊಳ್ಳಲು ಆಗದಂಥ ದುಃಖಗಳು ಬಂದು ಸುಖವೇ ಆಗದಂತೆ ಆಗುತ್ತದೆ.

ಕ್ಷುತ್ಕ್ಷಾಮಾನ್ ರೂಕ್ಷರಕ್ಷೋರದಖರನಖರಕ್ಷುಣ್ಣವಿಕ್ಷೋಭಿತಾಕ್ಷಾ-
ನಾಮಗ್ನಾನಂಧಕೂಪೇ ಕ್ಷುರಮುಖಮುಖರೈಃ ಪಕ್ಷಿಭಿರ್ವಿಕ್ಷತಾಂಗಾನ್ ।

ಪೂಯಾಸೃಜ್ಮೂತ್ರವಿಷ್ಠಾಕೃಮಿಕುಲಕಲಿಲೇ ತತ್ಕ್ಷಣಾಕ್ಷಿಪ್ತಶಕ್ತ್ಯಾ-
ದ್ಯಸ್ತ್ರವ್ರಾತಾರ್ದಿತಾಂಸ್ತ್ವದ್ವಿಷ ಉಪಜಿಹತೇ ವಜ್ರಕಲ್ಪಾ ಜಲೂಕಾಃ ॥ 13 ॥

ಕ್ಷುತ್ಕ್ಷಾಮಾನ್-ಹಸಿವೆಯಿಂದ ಸೊರಗಿ ಹೋದ ರೂಕ್ಷರಕ್ಷೋ- ರದಖರನಖ-ರಕ್ಷುಣ್ಣವಿಕ್ಷೋಭಿತಾಕ್ಷಾನ್-ರೂಕ್ಷರಕ್ಷ-ಕ್ರೂರರಾಕ್ಷಸರ ರದ-ಹಲ್ಲುಗಳಿಂದ ಖರನಖರ-ಚೂಪಾದ ಉಗುರುಗಳಿಂದ ಕ್ಷುಣ್ಣ-ಕಚ್ಚಿಸಿ ವಿಕ್ಷೋಭಿತಾಕ್ಷಾನ್-ಪರಚಿಸಿಕೊಂಡು ಕಂಗಾಲಾಗಿ ಕಣ್ಕಣ್ಣು ಬಿಡುವ ಕ್ಷುರಮುಖಮುಖರೈಃ-ಕತ್ತಿಯಂತಹ ಚೂಪಾದ ಮುಖ-ವುಳ್ಳ ಪಕ್ಷಿಭಿಃ-ಪಕ್ಷಿಗಳಿಂದ ವಿಕ್ಷತಾಂಗಾನ್-ಮೈಯೆಲ್ಲ ಕುಕ್ಕಿಸಿಕೊಂಡು ಗಾಯಗೊಂಡ ಅವಯವಗಳನ್ನು ಹೊಂದಿದ ಪೂಯಾಸೃಜ್ಮೂತ್ರವಿಷ್ಠಾಕೃಮಿಕುಲಕಲಿಲೇ -ಪೂಯಾಸೃಕ್-ಕೀವು ರಕ್ತ ಮೂತ್ರವಿಷ್ಠಾ-ಮೂತ್ರಮಲಗಳಿಂದ ಹಾಗೂ ಅವುಗಳ ಕೃಮಿಕುಲಕಲಿಲೇ-ರಾಸಿರಾಸಿಹುಳಗಳಿಂದ ಕೊಳೆತು ಗುಳ್ಳೆ ಕಟ್ಟಿದ ಅಂಧಕೂಪೇ-ಭಾವಿಯಲ್ಲಿ ಆಮಗ್ನಾನ್-ಬಿದ್ದು ಒದ್ದಾಡುವ ತ್ವದ್ವಿಷಃ-ನಿಮ್ಮ ದ್ವೇಷಿಗಳನ್ನು ತತ್ಕ್ಷಣಕ್ಷಿಪ್ತ-ಶಕ್ತ್ಯಾದ್ಯಸ್ತ್ರವ್ರಾತಾರ್ದಿತಾನ್-ತತ್ಕ್ಷಣ-ಪ್ರತಿಕ್ಷಣದಲ್ಲಿ ಕ್ಷಿಪ್ತ-ಎಸೆಯಲ್ಪಟ್ಟ ಶಕ್ತ್ಯಾದ್ಯಸ್ತ್ರ-ಶಕ್ತಿ ಮೊದಲಾದ ಆಯುಧಸಮೂಹದಿಂದ ವ್ರಾತಾರ್ದಿತಾನ್-ಪೀಡಿತರನ್ನಾಗಿ ಮಾಡಿ ವಜ್ರಕಲ್ಪಾಃ-ವಜ್ರಸದೃಶವಾದ ಜಲೂಕಾಃ-ಜಿಗಣೆಗಳು ಉಪಜಿಹತೇ-ರಕ್ತವನ್ನು ಹೀರುತ್ತವೆ.

**ಭಾವಾರ್ಥ**-ಹೇ ಪ್ರಾಣದೇವರೇ ನಿಮ್ಮ ದ್ವೇಷಿಗಳು ಕೀವು ರಕ್ತ ಮಲ ಮೂತ್ರಗಳಿಂದ ಹಾಗೂ ಅವುಗಳ ರಾಸಿರಾಸಿ ಹುಳುಗಳಿಂದ ಕೊಳೆತು ಗುಳ್ಳೆ ಕಟ್ಟಿದ ನರಕದ ಕತ್ತಲು ಹಾಳುಭಾವಿಯಲ್ಲಿ ಬಿದ್ದು ಒದ್ದಾಡುತ್ತಾರೆ. ಹಸಿವೆಯಿಂದ ಸೊರಗಿ ಹೋಗಿ ಕ್ರೂರರಕ್ಕಸರ ಹಲ್ಲುಗ್ಗಳಿಂದ ಮತ್ತು ಚೂಪಾದ ಉಗುರುಗಳಿಂದ ಕಚ್ಚಿಸಿ ಪರಚಿಸಿಕೊಂಡು ಕಂಗಾಲಾಗಿ ಕಣ್ಕಣ್ಣು ಬಿಡುತ್ತಾರೆ. ಜೋರಾಗಿ ಕಿರಚಾಡುತ್ತಾರೆ. ಕತ್ತಿಯಂಥ ಕೊಕ್ಕುಳ್ಳ ಹಕ್ಕಿಗಳು ಅವರ ಮೈಯೆಲ್ಲ ಕುಕ್ಕಿ ಗಾಯಗೊಳಿಸುತ್ತವೆ. ಇದಲ್ಲದೇ ಅದೇ ಕಾಲಕ್ಕೆ ಶಕ್ತಿ ಮೊದಲಾದ ಆಯುಧ ಸಮೂಹವು ಬಂದು ಬಾರಿಸುತ್ತದೆ. ಇದರ ಮೇಲೆ ವಜ್ರದ ಚೂರುಗಳಂತೆ ನಾಟುವ ರಕ್ತಹೀರುವ ಜಿಗಣೆಗಳು ಕಾಟಕೊಡುತ್ತವೆ.

ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ
ಸ್ವಾಮಿನ್ ಸರ್ವಾಂತರಾತ್ಮನ್ನಜರ ಜರಯಿತರ್ಜನ್ಮಮೃತ್ಯಾಮಯಾನಾಮ್ ।
ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಮಾಶು ದೇವ ॥ 14 ॥

ಮೇ-ನನಗೆ ಮಾತಃ-ತಾಯಿಯಾದ ಪಿತಃ-ತಂದೆಯೇ ಅತುಲಗುರೋ-ಅಸದೃಶವಾದ ಗುರುವಾದ ಭ್ರಾತಃ-ಅಣ್ಣನೆನಿಸಿದ ಇಷ್ಟಾಪ್ತಬಂಧೋ-ಪ್ರಿಯ-ಹಿತ ಬಂಧುವಾದ ಅಜರ-ಮುಪ್ಪಿಲ್ಲದ ಜನ್ಮಮೃತ್ಯಾಮಯಾನಾಂ-ಹುಟ್ಟು-ಸಾವು

**ಭಾವಾರ್ಥ**-ಹೇ ಜ್ಞಾನಿಶ್ರೇಷ್ಠರೇ ತಮ್ಮನ್ನು ದ್ವೇಷಿಸುವವರ ಮೇಲೆ ನಿಮ್ಮ ಭೃತ್ಯರು ಅತ್ತ ಇತ್ತ ಕಲ್ಲುಗಳನ್ನು ಜೋರಾಗಿ ಬೀಸಿ ಎಸೆಯುತ್ತಾರೆ. ಅತಿಯಾಗಿ ಕಾದ ಕೆಂಡದಂತೆ ಮಿತಿಮೀರಿ ಕಟಕಟವೆಂದು ಚೆನ್ನಾಗಿ ಸದ್ದುಮಾಡುತ್ತಾ ಘಟ್ಟಿಸಿದಾಗ ಮಿಂಚಿನಂಥ ಕಿಡಿಯಿಂದ ಬೆಂಕಿಯ ರಾಶಿಯು ಒಟ್ಟಾಗಿ ಹುಟ್ಟಿ ಎಲ್ಲೆಡೆ ಹರಡುತ್ತಾ ಬೇಯಿಸಿ ಬೆಂಡೆತ್ತುವಂತೆ ಈ ಕೆಸರು ತುಂಬಿದ ಕತ್ತಲೆಯ ನರಕದಲ್ಲಿ ಆ ದ್ವೇಷಿಗಳ ಮೈಯನ್ನು ಪೀಡಿಸುತ್ತದೆ.

ಅಸ್ಮಿನ್ನಸ್ಮದ್ಗುರೂಣಾಂ ಹರಿಚರಣಚಿರಧ್ಯಾನಸನ್ಮಂಗಲಾನಾಂ
ಯುಷ್ಮಾಕಂ ಪಾರ್ಶ್ವಭೂಮಿಂ ಧೃತರಣರಣಿಕಃ ಸ್ವರ್ಗಿಸೇವ್ಯಾಂ ಪ್ರಪನ್ನಃ ।
ಯಸ್ತೂದಾಸ್ತೇ ಸ ಆಸ್ತೇಽಧಿಭವಮಸುಲಭಕ್ಲೇಶನಿರ್ಮೋಕಮಸ್ತ-
ಪ್ರಾಯಾನಂದಂ ಕಥಂಚಿನ್ನ ವಸತಿ ಸತತಂ ಪಂಚಕಷ್ಟೇತಿಕಷ್ಟೇ ॥ 12 ॥

ಅಸ್ಮದ್ಗುರೂಣಾಂ-ನಮಗೆ ಉಪದೇಶಕರಾದ ಹರಿಚರಣಚಿರಧ್ಯಾನ- ಸನ್ಮಂಗಲಾ-ನಾಮ್-ಹರಿಚರಣ-ಪರಮಾತ್ಮನ ಪಾದಗಳ ಚಿರ-ಬಹುಕಾಲ ಧ್ಯಾನ-ಧ್ಯಾನದಿಂದ ಸನ್ಮಂಗಲಾನಾಮ್-ನಷ್ಟವಾಗದ ಮಂಗಲಗಳನ್ನು ಹೊಂದಿರುವ ಧೃತರಣರಣಿಕಸ್ವರ್ಗಿ-ಸೇವ್ಯಾಂ-ಧೃತರಣರಣಿಕ-ಹತ್ತಿರಕ್ಕೆ ಹಾತೊರೆಯುತ್ತ ಬಂದು ಸ್ವರ್ಗಿಸೇವ್ಯಾಂ-ಸ್ವರ್ಗದ ದೇವತೆಗಳು ಸೇವಿಸುವ ಯುಷ್ಮಾಕಂ-ನಿಮ್ಮ ಪಾರ್ಶ್ವಭೂಮಿಂ-ಸಮೀಪಪ್ರದೇಶವನ್ನು ಪ್ರಪನ್ನೋಽಪಿ-ಹೊಂದಿದಾಗ್ಯೂ ಅಸ್ಮಿನ್-ಈ ಲೋಕದಲ್ಲಿ ಯಃ-ಯಾವನು ಉದಾಸ್ತೇ-ಉಪೇಕ್ಷೆಯನ್ನು (ಔದಾಸೀನ್ಯವನ್ನು)ಮಾಡುತ್ತಾನೆ ಸಃ-ಅವನು ಅಸ್ತಪ್ರಾಯಾನಂದಂ- ಆನಂದರಹಿತವಾದ ಅಸುಲಭಕ್ಲೇಶನಿರ್ಮೋಕಂ-ಕ್ಲೇಶಗಳಿಂದ ಮೋಕ್ಷಕಾಣದ ಅಧಿಭವಂ-ನಿತ್ಯಸಂಸಾರದಲ್ಲಿ ಆಸ್ತೇ-ನೆಲೆಸುವನು. ಅತಿಕಷ್ಟೇ-ಅತ್ಯಂತ ದುಸ್ಸಹವಾದ ಪಂಚಕಷ್ಟೇ-ಅಂಧಂತಮಸ್ಸಿನಲ್ಲಿ ಕಥಂಚಿತ್-ಹೇಗೋ ಸಂತತಂ-ನಿರಂತರವಾಗಿ ನ ವಸತಿ-ನೆಲೆಸಲಾರನು.

**ಭಾವಾರ್ಥ**-ಹೇ ವಾಯುದೇವರೇ ಶ್ರೀಹರಿಯ ಪಾದಗಳ ನಿರಂತರ ಧ್ಯಾನದಿಂದ ಶುಭಮಂಗಳಗಳನ್ನು ಹೊಂದಿರುವ ಸ್ವರ್ಗದ ದೇವತೆಗಳು ನಿಮ್ಮ ಹತ್ತಿರದಲ್ಲಿ ಬಂದು ನಿಮ್ಮನ್ನು ಸೇವಿಸುತ್ತಾರೆ. ಈಗ ನಮಗೆಲ್ಲ ಉಪದೇಶಕರಾಗಿ ಇಲ್ಲಿಯೇ ಇರುವ ನಿಮಗೆ ಹತ್ತಿರವಾದ ಸ್ಥಳದಲ್ಲೇ ಇದ್ದರೂ ಔದಾಸೀನ್ಯ ತೋರುವ ಜನರು ಈ ಸಂಸಾರದಲ್ಲಿಯೇ ಬಿದ್ದಿರುತ್ತಾರೆ. ನಿರಂತರ ಪಂಚಕಷ್ಟಗಳಿಂದ ಬಹಳ ದುಃಖಕರವಾದ ತಮಸ್ಸಿನಲ್ಲಿ ಯಾವುದೇ ರೀತಿಯಿಂದ ಬೀಳದಿದ್ದರೂ ಅವರಿಗೆ ಈ ಸಂಸಾರದಲ್ಲಿಯೇ ಕಳೆದುಕೊಳ್ಳಲು ಆಗದಂಥ ದುಃಖಗಳು ಬಂದು ಸುಖವೇ ಆಗದಂತೆ ಆಗುತ್ತದೆ.

ಕ್ಷುತ್‌ಕ್ಷಾಮಾನ್ ರೂಕ್ಷರಕ್ಷೋರದಖರನಖರಕ್ಷುಣ್ಣವಿಕ್ಷೋಭಿತಾಕ್ಷಾ-
ನಾಮಗ್ನಾನಂಧಕೂಪೇ ಕ್ಷುರಮುಖಮುಖರೈಃ ಪಕ್ಷಿಭಿರ್ವಿಕ್ಷತಾಂಗಾನ್ ।

**ಪೂಯಾಸೃಙ್ಮೂತ್ರವಿಷ್ಠಾಕ್ರಿಮಿಕುಲಕಲಿಲೇ ತತ್ಕ್ಷಣಾಕ್ಷಿಪ್ತಶಕ್ತ್ಯಾ-**
**ದ್ಯಸ್ತ್ರವ್ರಾತಾರ್ದಿತಾಂಸ್ತ್ವದ್ವಿಷ ಉಪಜಿಹತೇ ವಜ್ರಕಲ್ಪಾ ಜಲೂಕಾಃ ॥ 13 ॥**

ಕ್ಷುತ್ಕ್ಷಾಮಾನ್–ಹಸಿವೆಯಿಂದ ಸೊರಗಿ ಹೋದ ರೂಕ್ಷರಕ್ಷೋ– ರದಖರನಖ–ರಕ್ಷುಣ್ಣವಿಕ್ಷೋಭಿತಾಕ್ಷಾನ್–ರೂಕ್ಷರಕ್ಷ–ಕ್ರೂರರಾಕ್ಷಸರ ರದ–ಹಲ್ಲುಗಳಿಂದ ಖರನಖರ–ಚೂಪಾದ ಉಗುರುಗಳಿಂದ ಕ್ಷುಣ್ಣ–ಕಚ್ಚಿಸಿ ವಿಕ್ಷೋಭಿತಾಕ್ಷಾನ್–ಪರಚಿಸಿಕೊಂಡು ಕಂಗಾಲಾಗಿ ಕಣ್ಕಣ್ಣು ಬಿಡುವ ಕ್ಷುರಮುಖಮುಖರೈಃ–ಕತ್ತಿಯಂತಹ ಚೂಪಾದ ಮುಖ–ವುಳ್ಳ ಪಕ್ಷಿಭಿಃ–ಪಕ್ಷಿಗಳಿಂದ ವಿಕ್ಷತಾಂಗಾನ್–ಮೈಯೆಲ್ಲ ಕುಕ್ಕಿಸಿಕೊಂಡು ಗಾಯಗೊಂಡ ಅವಯುವಗಳನ್ನು ಹೊಂದಿದ ಪೂಯಾಸೃಙ್ಮೂತ್ರವಿಷ್ಠಾಕ್ರಿಮಿಕುಲಕಲಿಲೇ –ಪೂಯಾಸೃಕ್–ಕೀವು ರಕ್ತ ಮೂತ್ರವಿಷ್ಠಾ–ಮೂತ್ರಮಲಗಳಿಂದ ಹಾಗೂ ಅವುಗಳ ಕ್ರಿಮಿಕುಲಕಲಿಲೇ–ರಾಸಿರಾಸಿಹುಳಗಳಿಂದ ಕೊಳೆತು ಗುಳ್ಳೆ ಕಟ್ಟಿದ ಅಂಧಕೂಪೇ–ಭಾವಿಯಲ್ಲಿ ಆಮಗ್ನಾನ್–ಬಿದ್ದು ಒದ್ದಾಡುವ ತ್ವದ್ವಿಷಃ–ನಿಮ್ಮ ದ್ವೇಷಿಗಳನ್ನು ತತ್ಕ್ಷಣಾಕ್ಷಿಪ್ತ–ಶಕ್ತ್ಯಾದ್ಯಸ್ತ್ರವ್ರಾತಾರ್ದಿತಾನ್–ತತ್ಕ್ಷಣ–ಪ್ರತಿಕ್ಷಣದಲ್ಲಿ ಕ್ಷಿಪ್ತ–ಎಸೆಯಲ್ಪಟ್ಟ ಶಕ್ತ್ಯಾದ್ಯಸ್ತ್ರ–ಶಕ್ತಿ ಮೊದಲಾದ ಆಯುಧಸಮೂಹದಿಂದ ವ್ರಾತಾರ್ದಿತಾನ್–ಪೀಡಿತರನ್ನಾಗಿ ಮಾಡಿ ವಜ್ರಕಲ್ಪಾಃ–ವಜ್ರಸದೃಶವಾದ ಜಲೂಕಾಃ–ಜಿಗಣೆಗಳು ಉಪಜಿಹತೇ–ರಕ್ತವನ್ನು ಹೀರುತ್ತವೆ.

**ಭಾವಾರ್ಥ**–ಹೇ ಪ್ರಾಣದೇವರೇ ನಿಮ್ಮ ದ್ವೇಷಿಗಳು ಕೀವು ರಕ್ತ ಮಲ ಮೂತ್ರಗಳಿಂದ ಹಾಗೂ ಅವುಗಳ ರಾಸಿರಾಸಿ ಹುಳುಗಳಿಂದ ಕೊಳೆತು ಗುಳ್ಳೆ ಕಟ್ಟಿದ ನರಕದ ಕತ್ತಲು ಹಾಳುಭಾವಿಯಲ್ಲಿ ಬಿದ್ದು ಒದ್ದಾಡುತ್ತಾರೆ. ಹಸಿವೆಯಿಂದ ಸೊರಗಿ ಹೋಗಿ ಕ್ರೂರರಕ್ಕಸರ ಹಲ್ಲುಗಳಿಂದ ಮತ್ತು ಚೂಪಾದ ಉಗುರುಗಳಿಂದ ಕಚ್ಚಿಸಿ ಪರಚಿಸಿಕೊಂಡು ಕಂಗಾಲಾಗಿ ಕಣ್ಕಣ್ಣು ಬಿಡುತ್ತಾರೆ. ಜೋರಾಗಿ ಕಿರಚಾಡುತ್ತಾರೆ. ಕತ್ತಿಯಂಥ ಕೊಕ್ಕುಳ್ಳ ಹಕ್ಕಿಗಳು ಅವರ ಮೈಯೆಲ್ಲ ಕುಕ್ಕಿ ಗಾಯಗೊಳಿಸುತ್ತವೆ. ಇದಲ್ಲದೇ ಅದೇ ಕಾಲಕ್ಕೆ ಶಕ್ತಿ ಮೊದಲಾದ ಆಯುಧ ಸಮೂಹವು ಬಂದು ಬಾರಿಸುತ್ತದೆ. ಇದರ ಮೇಲೆ ವಜ್ರದ ಚೂರುಗಳಂತೆ ನಾಟುವ ರಕ್ತಹೀರುವ ಜಿಗಣೆಗಳು ಕಾಟಕೊಡುತ್ತವೆ.

ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ
ಸ್ವಾಮಿನ್ ಸರ್ವಾಂತರಾತ್ಮನ್ನಜರ ಜರಯಿತರ್ಜನ್ಮಮೃತ್ಯಾಮಯಾನಾಮ್ ।
ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಮಾಶು ದೇವ ॥ 14 ॥

ಮೇ–ನನಗೆ ಮಾತಃ–ತಾಯಿಯಾದ ಪಿತಃ–ತಂದೆಯೇ ಅತುಲಗುರೋ–ಅಸದೃಶವಾದ ಗುರುವಾದ ಭ್ರಾತಃ–ಅಣ್ಣನೆನಿಸಿದ ಇಷ್ಟಾಪ್ತಬಂಧೋ–ಪ್ರಿಯ–ಹಿತ ಬಂಧುವಾದ ಅಜರ–ಮುಪ್ಪಿಲ್ಲದ ಜನ್ಮಮೃತ್ಯಾಮಯಾನಾಂ–ಹುಟ್ಟು–ಸಾವು

ರೋಗಗಳನ್ನು ಜರಯಿತಃ-ಪರಿಹರಿಸುವ ಭಗವನ್-ಪೂಜ್ಯರಾದ ದೇವ-ಜ್ಞಾನಾದಿ ಗುಣಗಳಿಂದ ಕೂಡಿದ ಸರ್ವಾಂತರಾತ್ಮನ್-ಎಲ್ಲರ ಅಂತರ್ಯಾಮಿಯಾದ ಸ್ವಾಮಿನ್-ನಿಯಾಮಕರಾದ ಹೇ ಮಾತರಿಶ್ವನ್-ವಾಯುದೇವರೇ ಗೋವಿಂದೇ-ಪರಮಾತ್ಮನಲ್ಲಿ ಚ-ಮತ್ತು ಭವತಿ-ನಿಮ್ಮಲ್ಲಿ ಊರ್ಜಿತಾಂ-ಅತ್ಯಂತ ಹಿರಿದಾದ ನಿರ್ನಿಮಿತ್ತಾಂ-ನಿರುಪಾಧಿಕವಾದ (ಯಾವುದೇ ನಿಮಿತ್ತಗಳಿರದ) ನಿರ್ವ್ಯಾಜಾಂ-ಡಾಂಭಿಕವಾಗದಂಥ (ನಿಷ್ಕಪಟವಾದ)ನಿಶ್ಚಲಾಂ-ಸ್ಥಿರವಾದ ಸದ್ಗುಣಗಣಬೃಹತೀಂ-ಮಹಾತ್ಮ್ಯಜ್ಞಾನಾದಿ-ಗುಣಗಳಿಂದ ಅಭಿವೃದ್ಧವಾದ ಶಾಶ್ವತೀಂ-ಶಶ್ವದೇಕಪ್ರಕಾರವಾದ ಭಕ್ತಿಂ-ಭಕ್ತಿಯನ್ನು ಆಶು-ಬೇಗನೆ ದೇಹಿ-ಕೊಡಿ.

**ಭಾವಾರ್ಥ**-ವಾಯುದೇವರೇ ನೀವೇ ನನಗೆ ತಾಯಿ ತಂದೆ ಅಸದೃಶಗುರುಗಳು. ಹಿರಿಯಣ್ಣ ಪ್ರೀತಿಯ ಬಂಧುಗಳು ಒಡೆಯರು ಹೇ ಸರ್ವಾಂತರ್ಯಾಮಿಯಾದ ವಾಯುದೇವರೇ ಹುಟ್ಟು ಸಾವು ಹಾಗೂ ರೋಗಗಳನ್ನು ಪರಿಹರಿಸುವ ಮುಪ್ಪಿಲ್ಲದ ಮುಖ್ಯಪ್ರಾಣರೇ ಗೋವಿಂದನಲ್ಲಿ ಹಾಗೂ ನಿಮ್ಮಲ್ಲಿ ಕುಗ್ಗದ ಭಕ್ತಿಯನ್ನು ಕರುಣಿಸಿ. ಆಸೆಗಳಿಲ್ಲದ, ಡಾಂಭಿಕವಾಗದಂತಹ ಭಕ್ತಿಯನ್ನು ಕರುಣಿಸಿ. ಅತ್ತ ಇತ್ತ ಕದಲದ ಒಂದೇ ರೀತಿಯಾದ ಹಾಗೂ ಸದ್ಗುಣಗಳ ಸಮೂಹದಿಂದ ಬೃಹದಾಕಾರವಾದ ಭಕ್ತಿಯನ್ನು ಕರುಣಿಸಿರಿ.

ವಿಷ್ಣೋರತ್ಯುತ್ತಮತ್ವಾದಖಿಲಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾಂ
ಸಂಶ್ಲಿಷ್ಟೇ ಶ್ರೀಧರಾಭ್ಯಾಮಮುಮಥ ಪರಿವಾರಾತ್ಮನಾ ಸೇವಕೇಷು ।
ಯಃ ಸಂಧತ್ತೇ ವಿರಿಂಚಿಶ್ವಸನವಿಹಗಪಾನಂತರುದ್ರೇಂದ್ರಪೂರ್ವೇ-
ಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ ವಾಯುರಸ್ಮದ್ಗುರುಸ್ತಮ್॥ 15 ॥

ವಿಷ್ಣೋಃ-ಪರಮಾತ್ಮನು ಅಖಿಲಗುಣಗಣೈಃ-ಸಕಲಗುಣಸಮೂಹದಿಂದ ಅತ್ಯುತ್ತಮ-ತ್ವಾತ್-ಸರ್ವೋತ್ತಮನಾದ್ದರಿಂದ ಶ್ರೀಧರಾಭ್ಯಾಂ-ಶ್ರೀದೇವಿಭೂ-ದೇವಿಯರಿಂದ ಆಶ್ಲಿಷ್ಟೇ-ಆಲಿಂಗಿತನಾದ ತತ್ರ-ಆ ಪರಮಾತ್ಮನಲ್ಲಿ ಗರಿಷ್ಠಾಂ-ಶ್ರೇಷ್ಠವಾದ ಅಮುಂ ಭಕ್ತಿಂ-ಈ ಭಕ್ತಿಯನ್ನು ಗರಿಷ್ಠಾಂ-ಅತ್ಯಂತ ಮಿಗಿಲಾಗಿ ಅಥ-ಬಳಿಕ ಪರಿವಾರಾತ್ಮನಾ-ಪರಿವಾರ-ರೂಪವಾಗಿ ವಿರಿಂಚಿಶ್ವಸನವಿಹಗಪಾನಂತ ರುದ್ರೇಂದ್ರಪೂರ್ವೇಷುವಿರಿಂಚಿ-ಬ್ರಹ್ಮ ಶ್ವಸನ-ವಾಯು ವಿಹಗಪ-ಗರುಡ ಅನಂತ-ಶೇಷ ರುದ್ರ-ರುದ್ರದೇವರು ಇಂದ್ರಪೂರ್ವೇಷು-ಇಂದ್ರದೇವರೇ ಮೊದಲಾದ ಸೇವಕೇಷು-ಸೇವಕರಲ್ಲಿ ಯಃ-ಯಾವನು ತಾರತಮ್ಯಂ-ತಾರತಮ್ಯವನ್ನು ಆಧ್ಯಾಯನ್-ತಿಳಿಯುವನೋ ಸಂಧತ್ತೇ-ಹೊಂದುವನೋ (ತಿಳಿದು ಚೆನ್ನಾಗಿ ಸೇವಿಸುವವನೋ) ತಂ-ಅಂತಹವನನ್ನು ಅಸ್ಮದ್ಗುರುಃ-ನಮ್ಮ ಮೂಲಗುರುಗಳಾದ ವಾಯುಃ-ವಾಯುದೇವರು ಸದಾ-ಯಾವಾಗಲೂ ಸ್ಫುಟಂ-ಚೆನ್ನಾಗಿ ಅವತಿ-ರಕ್ಷಿಸುತ್ತಾರೆ.

ಭಾವಾರ್ಥ-ಶ್ರೀಭೂದೇವಿಯರಿಂದ ಆಲಿಂಗಿತನಾದ ಭಗವಂತ ಸಕಲ ಗುಣಪರಿಪೂರ್ಣನು. ಅವನು ಸರ್ವೋತ್ತಮನಾದ್ದರಿಂದ ಆ ಭಗವಂತನಲ್ಲಿ ಭಕ್ತಿಯೂ ಸರ್ವಾಧಿಕವು. ಅವನ ಪರಿವಾರದೇವತೆಗಳಾದ ಬ್ರಹ್ಮ ವಾಯು ಗರುಡ ಶೇಷ ರುದ್ರ ಇಂದ್ರ ಮೊದಲಾದ ದೇವತೆಗಳಲ್ಲಿ ತಾರತಮ್ಯವನ್ನು ತಿಳಿದು ಸೇವಿಸುವನೋ ಅಂತಹವನನ್ನು ನಮ್ಮೆಲ್ಲರ ಗುರುಗಳಾದ ಪ್ರಾಣದೇವರು ನಿಶ್ಚಿತವಾಗಿಯೂ ರಕ್ಷಿಸುತ್ತಾರೆ.

ತತ್ತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ ಯೋಗ್ಯತಾತಾರತಮ್ಯಾ-
ದಾಧತ್ಸೇ ಮಿಶ್ರಬುದ್ಧೀಂಸ್ತ್ರಿದಿವನಿರಯಭೂಗೋಚರಾನ್ ನಿತ್ಯಬದ್ಧಾನ್ ।
ತಾಮಿಸ್ರಾಂಧಾದಿಕಾಖ್ಯೇ ತಮಸಿ ಸುಬಹುಲಂ ದುಃಖಯಸ್ಯನ್ಯಥಾಜ್ಞಾನ್
ವಿಷ್ಣೋರಾಜ್ಞಾಭಿರಿತ್ಥಂ ಶ್ರುತಿಶತಮಿತಿಹಾಸಾದಿ ಚಾಕರ್ಣಯಾಮಃ ॥ 16 ॥

ಹೇ ಗುರೋ-ತತ್ತ್ವೋಪದೇಶಕರಾದ ವಾಯುದೇವರೇ ವಿಷ್ಣೋಃ-ಪರಮಾತ್ಮನ ಆಜ್ಞಾಭಿಃ-ಅಪ್ಪಣೆಯಂತೆ ತತ್ತ್ವಜ್ಞಾನ್-ತತ್ತ್ವಜ್ಞಾನಿಗಳಾದ ಮುಕ್ತಿಭಾಜಃ-ಮುಕ್ತಿಯೋಗ್ಯರಿಗೆ ಯೋಗ್ಯತಾತಾರತಮ್ಯಾತ್-ಅವರ ಯೋಗ್ಯತೆಗೆ ಅನುಗುಣವಾಗಿ ಸುಖಯಸಿ-ಸುಖಗಳನ್ನು ನೀಡುವಿರಿ. ಮಿಶ್ರಬುದ್ಧೀನ್-ಮಿಶ್ರಬುದ್ಧಿಗಳಾದ ನಿತ್ಯಬದ್ಧಾನ್ -ನಿತ್ಯಸಂಸಾರಿಗಳನ್ನು ತ್ರಿದಿವನಿರಯಭೂಗೋಚರಾನ್-ಸ್ವರ್ಗ, ನರಕ, ಭೂಲೋಕಗಳಲ್ಲಿ ಚರಿಸುವಂತೆ ಆಧತ್ಸೇ-ಮಾಡುವಿರಿ ಅನ್ಯಥಾಜ್ಞಾನ್-ವಿರುದ್ಧವಾಗಿ ತಿಳಿಯುವ (ಮಿಥ್ಯಾಜ್ಞಾನಿಗಳಾದ) ತಾಮಿಸ್ರಾನ್- ತಮೋಯೋಗ್ಯರಿಗೆ ಅಂಧಾದಿಕಾಖ್ಯೇ-ತಾಮಿಸ್ರ ಅಂಧತಾಮಿಸ್ರ ಎಂಬ ಹೆಸರಿನ ತಮಸಿ-ತಮಸ್ಸಿನಲ್ಲಿ ಸುಬಹುಲಂ-ಅತಿಶಯವಾಗಿ ದುಃಖಯಸಿ-ದುಃಖವನ್ನು ಕೊಡುವವರು ಆಗಿದ್ದೀರಿ ಎಂದು ಇತ್ಥಂ-ಈ ರೀತಿಯಾಗಿ ಶ್ರುತಿಶತಂ-ನೂರಾರು ಶ್ರುತಿಗಳು ಮತ್ತು ಇತಿಹಾಸಾದಿ ಚ-ಇತಿಹಾಸಪುರಾಣಾದಿಗಳನ್ನು ಆಕರ್ಣಯಾಮಃ- ಕೇಳುವವರಾಗಿದ್ದೇವೆ.

ಭಾವಾರ್ಥ- ತತ್ತ್ವಜ್ಞಾನವನ್ನು ಉಪದೇಶಿಸುವ ವಾಯುದೇವರೇ ತತ್ತ್ವಜ್ಞಾನಿಗಳಾಗಿ ಮುಕ್ತಿ ಪಡೆದ ಸಜ್ಜನರಿಗೆ ಅವರವರ ಯೋಗ್ಯತೆಗೆ ಅನುಗುಣವಾಗಿ ವಿಷ್ಣುವಿನ ಅಪ್ಪಣೆಯಂತೆ ಸುಖಗಳನ್ನು ನೀಡುವವರು ನೀವು. ಹಾಗೆಯೇ ಮಿಶ್ರಬುದ್ಧಿಗಳಾದ ನಿತ್ಯಸಂಸಾರಿಗಳನ್ನು ಸ್ವರ್ಗ ನರಕ ಭೂಲೋಕಗಳಲ್ಲಿ ಅಲೆಸುತ್ತಿರುವವರೂ ನೀವು. ವಿಪರೀತಜ್ಞಾನಿಗಳನ್ನು ತಮಸ್ಸಿನಲ್ಲಿ ಹಾಕಿ ಅಲ್ಲಿ ಅವರಿಗೆ ಬಹಳ ದುಃಖವನ್ನು ಕೊಡುವವರೂ ನೀವೇ.

ವಂದೇಽಹಂ ತಂ ಹನೂಮಾನಿತಿ ಮಹಿತಮಹಾಪೌರುಷೋ ಬಾಹುಶಾಲೀ
ಖ್ಯಾತಸ್ತೇಽಗ್ರ್ಯೋಽವತಾರಃ ಸಹಿತ ಇಹ ಬಹುಬ್ರಹ್ಮಚರ್ಯಾದಿಧರ್ಮೈಃ ।
ಸಸ್ನೇಹಾನಾಂ ಸಹಸ್ವಾನಹರಹರಹಿತಂ ನಿರ್ದಹನ್ ದೇಹಭಾಜಾ-
ಮಂಹೋಮೋಹಾಪಹೋ ಯಃ ಸ್ಪೃಹಯತಿ ಮಹತೀಂ ಭಕ್ತಿಮದ್ಯಾಪಿ ರಾಮೇ
॥ 17 ॥

ಹೇ ಮುಖ್ಯಪ್ರಾಣದೇವರೇ ಇಹ-ಇಲ್ಲಿ ತೇ-ನಿಮ್ಮ ಸಹಸ್ವಾನ್-ಅತ್ಯಂತ ಬಲಿಷ್ಠವಾದ ಬಹುಬ್ರಹ್ಮಚರ್ಯಾದಿಧರ್ಮೈಃ-ಬಹು-ಬಹಳವಾದ ಬ್ರಹ್ಮಚರ್ಯಾದಿ-ಬ್ರಹ್ಮಚರ್ಯ ಮೊದಲಾದ ಧರ್ಮೈಃ-ಧರ್ಮಗಳಿಂದ ಸಹಿತಃ-ಸಹಿತವಾದ ಅಗ್ರ್ಯಃ-ಮೊದಲನೆಯದಾದ ಹನೂಮಾನ್-ಹನುಮಂತ ಎಂಬ ಅವತಾರಃ-ಅವತಾರವು ಮಹಿತಮಹಾಪೌರುಷಃ -ಪೂಜಿತವಾದ ಮಹಾಪರಾಕ್ರಮವುಳ್ಳ ಬಾಹುಶಾಲೀ-ಬಾಹುಬಲವುಳ್ಳದ್ದು ಎಂದು ಖ್ಯಾತಃ-ಪ್ರಸಿದ್ಧವಾಗಿ ಅಹರಹಃ-ಪ್ರತಿದಿನವೂ ಅಹಿತಂ-ಅನಿಷ್ಟವನ್ನು ನಿರ್ದಹನ್-ನಾಶಮಾಡುತ್ತ ಅದ್ಯಾಪಿ-ಇವತ್ತಿಗೂ ರಾಮೇ-ರಾಮದೇವರಲ್ಲಿ ಮಹತೀಂ-ಮಹತ್ತರವಾದ ಭಕ್ತಿಂ-ಭಕ್ತಿಯನ್ನು ಸ್ಪೃಹಯತಿ-ಬಯಸುತ್ತಿರುವುದೋ (ಶ್ರೀರಾಮನನ್ನು ಭಕ್ತಿಯಿಂದ ನಿರಂತರ ಪೂಜಿಸುವ) ತಂ-ಅಂತಹ ಹನುಮದವತಾರವನ್ನು ಅಹಂ-ನಾನು ವಂದೇ-ನಮಸ್ಕರಿಸುತ್ತೇನೆ.

**ಭಾವಾರ್ಥ**- ಹೇ ವಾಯುದೇವರೇ ನಿಮ್ಮ ಮೊದಲನೆಯ ಅವತಾರಕ್ಕೆ ವಂದಿಸುವೆ. ತೋಳುಗಳಿಂದ ಕಂಗೊಳಿಸುತ್ತ ಮಹಾಪೌರುಷದಿಂದ ಗೌರವಗಳಿಸಿದ ಹನುಮಂತನೆಂದು ಹೆಸರುವಾಸಿಯಾದ ಅವತಾರವಿದು. ನಿಮ್ಮ ಭಕ್ತರ ಅನಿಷ್ಟಗಳನ್ನು ದೂರಮಾಡಿ ದುರಾಚಾರ ದುರ್ವಿಚಾರಗಳನ್ನು ಪರಿಹರಿಸುವ ಬ್ರಹ್ಮಚರ್ಯಾದಿ ಬಹುಧರ್ಮಗಳನ್ನು ಆಚರಿಸಿದ ಬಲಿಷ್ಠವಾದ ಅವತಾರವಿದು. ಇಂದಿಗೂ ರಾಮಚಂದ್ರದೇವರಲ್ಲಿ ಮಹತ್ತರ ಭಕ್ತಿಯನ್ನು ಬಯಸುವ ಅವತಾರವಿದು.

ಪ್ರಾಕ್ಪಂಚಾಶತ್ಸಹಸ್ರೈರ್ವ್ಯವಹಿತಮಮಿತಂ ಯೋಜನೈಃ ಪರ್ವತಂ ತ್ವಂ
ಯಾವತ್ಸಂಜೀವನಾದ್ಯೌಷಧನಿಧಿಮಧಿಕ ಪ್ರಾಣ ಲಂಕಾಮನೈಷೀಃ ।
ಅದ್ರಾಕ್ಷೀದುತ್ಪತಂತಂ ತತ ಉತ ಗಿರಿಮುತ್ಪಾಟಯಂತಂ ಗೃಹೀತ್ವಾ-
ಯಾಂತಂ ಖೇ ರಾಘವಾಂಘ್ರೌ ಪ್ರಣತಮಪಿ ತದೈಕಕ್ಷಣೇ ತ್ವಾಂ ಹಿ ಲೋಕಃ
॥ 18 ॥

ಅಧಿಕ-ಜೀವರಲ್ಲಿ ಉತ್ತಮರಾದ ಪ್ರಾಣ-ಮುಖ್ಯಪ್ರಾಣದೇವರೇ ಪ್ರಾಕ್-ಹಿಂದೆ ತ್ವಂ-ನೀವು ಪಂಚಾಶತ್‌ಸಹಸ್ರೈಃ-ಐವತ್ತು ಸಾವಿರ ಯೋಜನೆಗಳಿಂದ ವ್ಯವಹಿತಮ್-ದೂರದಲ್ಲಿ ಅಮಿತಮ್-ಅಪಾರವಾದ ಸಂಜೀವನಾದ್ಯೌಷಧನಿಧಿಮ್-ಸಂಜೀವನ ಮೊದಲಾದ ಔಷಧಿಗಳಿಗೆ ನಿಧಿಯಾದ ಪರ್ವತಂ-ಪರ್ವತವನ್ನು ತ್ವಮ್-ನೀವು ಯಾವತ್-ಯಾವಾಗ ಲಂಕಾಂ-ಲಂಕೆಗೆ ಅನೈಷೀಃ-ತೆಗೆದುಕೊಂಡು ಬಂದಿರೋ ತಾವತ್ -ಆಗ ತ್ವಾಮ್-ನಿಮ್ಮನ್ನು ಲೋಕಃ-ಜನರು ಉತ್ಪತಂತಮ್-ಮೇಲಕ್ಕೆ ನೆಗೆದವರನ್ನಾಗಿ ಅಥ-ಬಳಿಕ ತತಃ-ಅಲ್ಲಿಂದ ಗಿರಿಮ್-ಪರ್ವತವನ್ನು ಉತ್ಪಾಟಯಂತಂ-ಕಿತ್ತುವವರನ್ನಾಗಿ ಗೃಹೀತ್ವಾ-ತೆಗೆದುಕೊಂಡು ಖೇ-ಗಗನದಲ್ಲಿ ಆಯಾಂತಂ-ಹಾರಿ ಇತ್ತ ಬರುವದನ್ನು ಉತ-ಹಾಗೂ ರಾಘವಾಂಘ್ರೌ-ಶ್ರೀರಾಮಚಂದ್ರದೇವರ ಪಾದಗಳಲ್ಲಿ ಪ್ರಣತಂ-ನಮಸ್ಕರಿಸಿದವರನ್ನಾಗಿ ಏಕಕ್ಷಣೇ-ಒಂದೇ ಕ್ಷಣದಲ್ಲಿ ಅದ್ರಾಕ್ಷೀತ್ ಹಿ-ಕಂಡರಲ್ಲವೇ.

ಭಾವಾರ್ಥ-ಮುಖ್ಯಪ್ರಾಣದೇವರೇ ಹಿಂದೆ ನೀವು ಐವತ್ತು ಸಾವಿರ ಯೋಜನೆ ದೂರದಲ್ಲಿ ಊಹೆಗೂ ನಿಲುಕದಂತಿದ್ದ ಸಂಜೀವಿನಿ ಮೊದಲಾದ ಔಷಧಿಗಳ ಖನಿಯಾದ ದೊಡ್ಡಪರ್ವತವನ್ನು ಯಾವಾಗ ಲಂಕೆಗೆ ತೆಗೆದುಕೊಂಡು ಬಂದಿರೋ ಆಗ ನೀವು ಇಲ್ಲಿಂದ ಅಲ್ಲಿಗೆ ಹಾರಿದ್ದನ್ನು ಮತ್ತೆ ಪರ್ವತ ಕಿತ್ತುವದನ್ನು ಕಿತ್ತಿದ ಪರ್ವತವನ್ನು ಕೈಯಲ್ಲಿ ಹೊತ್ತು ಇತ್ತ ಬರುವದನ್ನು ಹಾಗೂ ಶ್ರೀರಾಮಚಂದ್ರದೇವರ ಪಾದಗಳಿಗೆ ಭಕ್ತಿಯಿಂದ ಬಾಗುವದನ್ನೂ ಸಹ ಜನರೆಲ್ಲ ಕೇವಲ ಒಂದೇ ಕ್ಷಣದಲ್ಲಿ ಕಂಡಿದ್ದರು.

ಕ್ಷಿಪ್ತಃ ಪಶ್ಚಾತ್ ಸಲೀಲಂ ಶತಮತುಲಮತೇ ಯೋಜನಾನಾಂ ಸ ಉಚ್ಚ-
ಸ್ತಾವದ್ವಿಸ್ತಾರವಾಂಶ್ಚಾಪ್ಯುಪಲಲವ ಇವ ವ್ಯಗ್ರಬುಧ್ಯಾ ತ್ವಯಾತಃ ।
ಸ್ವಸ್ವಸ್ಥಾನಸ್ಥಿತಾತಿಸ್ಥಿರಶಕಲಶಿಲಾಜಾಲಸಂಶ್ಲೇಷನಷ್ಟ-
ಚ್ಛೇದಾಂಕಃ ಪ್ರಾಗಿವಾಭೂತ್ ಕಪಿವರವಪುಷಸ್ತೇ ನಮಃ ಕೌಶಲಾಯ ॥19॥

ಅತುಲಮತೇ-ಅಸದೃಶವಾದ ಬುದ್ಧಿವುಳ್ಳಂತಹ ವಾಯುದೇವರೇ ಪಶ್ಚಾತ್-ಅನಂತರ ಶತಂ-ನೂರು ಯೋಜನಾನಾಂ-ಯೋಜನೆಗಳ ಉಚ್ಚಃ-ಉನ್ನತವಾದಂತಹ ಚ-ಮತ್ತು ತಾವತ್-ಅಷ್ಟೇ ವಿಸ್ತಾರವಾನ್-ವಿಸ್ತಾರವಾಗಿದ್ದ ಸಃ-ಆ ಪರ್ವತವು ಸಲೀಲಮ್-ಲೀಲಾಜಾಲವಾಗಿ ಉಪಲಲವಃ-ಕಲ್ಲಿನ ತುಣುಕು ಇವ-ಎಂಬಂತೆ ವ್ಯಗ್ರಬುದ್ಧ್ಯಾ-ಬೇಸರದ ಮನಸ್ಸಿನಿಂದ ತ್ವಯಾ-ನಿಮ್ಮಿಂದ ಕ್ಷಿಪ್ತಃ-ಎಸೆಯಲ್ಪಟ್ಟು ಸ್ವಸ್ವಸ್ಥಾನಸ್ಥಿತಾತಿಸ್ಥಿರಶಕಲ-ಶಿಲಾಜಾಲ-ಸಂಶ್ಲೇಷನಷ್ಟಚ್ಛೇದಾಂಕಃ-ಸ್ವಸ್ವ-ತಮ್ಮ ತಮ್ಮ ಸ್ಥಾನ-ಸ್ಥಾನಗಳಲ್ಲಿ ಸ್ಥಿತ-ಅತ್ಯಂತ ಸ್ಥಿರವಾಗಿ ನೆಲೆಸಿದ್ದ ಶಕಲ-ಕಲ್ಲಿನ ಸಂಶ್ಲೇಷನಷ್ಟಚ್ಛೇದಾಂಕಃ-ಶಿಲಾಜಾಲ ತುಣುಕುಗಳ ಗುಂಪಿನಲ್ಲಿ ಕಿತ್ತಿದ ಗುರುತೂ ಸಹ ಇಲ್ಲ ದ ಹಾಗೆ ಮೊದಲು ಹೇಗಿತ್ತೋ ಹಾಗೆ ಅಭೂತ್-ಆಯಿತು ಅತಃ-ಆದ್ದರಿಂದ ಕಪಿವರವಪುಷಃ-ಕಪಿಶ್ರೇಷ್ಠರೂಪವನ್ನು ಹೊಂದಿದ ತೇ-ನಿಮ್ಮ ಕೌಶಲಾಯ-ಕೌಶಲಕ್ಕೆ ನಮಃ-ನಮಸ್ಕಾರವು.

ಭಾವಾರ್ಥ-ಹೇ ಅಸದೃಶವಾದ ಬುದ್ಧಿವುಳ್ಳ ವಾಯುದೇವರೇ ನೀವು ನೂರು ಯೋಜನ ಎತ್ತರವೂ ವಿಸ್ತಾರವೂ ಆದ ದೊಡ್ಡ ಪರ್ವತವನ್ನು ಲೆಕ್ಕಿಸದೇ ಆಡುತ್ತಾ ಕಲ್ಲುಚೂರನ್ನೆಂಬುವಂತೆ ಇಲ್ಲಿಂದಲೇ ಹಿಂದಕ್ಕೆ ಎಸೆದಿರಿ. ಆಗ ಅದು ತಮ್ಮ ಸ್ಥಳದಲ್ಲಿ ಗಟ್ಟಿಯಾದ ಕಲ್ಲುತುಂಡುಗಳ ಗುರುತುಳ್ಳ ಬಂಡೆಗಳ ರಾಶಿಯೊಡನೆ ದೃಢವಾಯಿತು. ಕಿತ್ತುವಾಗ ಆದಂತಹ ಗುರುತುಗಳೆಲ್ಲ ಮಾಯವಾಗಿ ಮೊದಲು ಹೇಗೆ ಇತ್ತೋ ಹಾಗೆಯೇ ಆಯಿತು. ಕಪಿಶ್ರೇಷ್ಠರೂಪವನ್ನು ಹೊಂದಿದ ಆ ನಿಮ್ಮ ಚಾತುರ್ಯಕ್ಕೆ ನಾನು ಶಿರಬಾಗಿ ನಮಸ್ಕರಿಸುತ್ತೇನೆ.

ದೃಷ್ಟ್ವಾ ದುಷ್ಟಾಧಿಪೋರಃ ಸ್ಫುಟಿತಕನಕಸದ್ವರ್ಮಘೃಷ್ಟಾಸ್ಥಿಕೂಟಂ
ನಿಷ್ಪಿಷ್ಟಂ ಹಾಟಕಾದ್ರಿಪ್ರಕಟತಟತಟಾಕಾತಿಶಂಕೋ ಜನೋಽಭೂತ್ ।

ಯೇನಾಽಜೌ ರಾವಣಾರಿಪ್ರಿಯನಟನಪಟುರ್ಮುಷ್ಟಿರಿಷ್ಟಂ ಪ್ರದೇಷ್ಟುಂ
ಕಿಂ ನೇಷ್ಟೇ ಮೇ ಸ ತೇಽಷ್ಟಾಪದಕಟಕತಟಿತ್ಕೋಟಿಭಾಮೃಷ್ಟಕಾಷ್ಠಃ ॥ 20 ॥

ಆಜೌ-ಯುದ್ಧದಲ್ಲಿ ಯೇನ-ಯಾವ ನಿನ್ನ ಮುಷ್ಠಿಯಿಂದ ನಿಷ್ಪಿಷ್ಟಮ್-ಪುಡಿ-ಗೈಯ್ಯಲ್ಪಟ್ಟ ಸ್ಫುಟಿತಕನಕಸದ್ವರ್ಮಘೃಷ್ಟಾಸ್ಥಿಕೂಟಮ್- ಸ್ಫುಟಿತ್-ಒಡೆದ ಕನಕ-ಚಿನ್ನದ ಸದ್ವರ್ಮ-ಶ್ರೇಷ್ಠವಾದ ಕವಚ ಹಾಗೂ ಘೃಷ್ಟಾಸ್ಥಿಕೂಟಂ-ಪುಡಿಯಾದ ಮೂಳೆಗಳೆಂಬ ಶಿಖರದ ದುಷ್ಟಾಧಿಪೋರಃ-ದುಷ್ಟರ ಅಧಿಪತಿಯಾದ ರಾವಣನ ವಕ್ಷಸ್ಥಳವನ್ನು ದೃಷ್ಟ್ವಾ-ಕಂಡು ಜನಃ-ಜನರು ಹಾಟಕಾದ್ರಿಪ್ರಕಟತಟತಟಾಕಾತಿಶಂಕಃ-ಹಾಟಕ-ಚಿನ್ನದ ಅದ್ರಿ-ಬೆಟ್ಟವಾದ ಮೇರುಪರ್ವತದ ಪ್ರಕಟ-ಹೊಳೆಯುವ ತಟ-ತಪ್ಪಲಿನ ತಟಾಕಾತಿಶಂಕಃ-ಕೊಳ ಎಂಬುದಾಗಿ ಭ್ರಾಂತರಾಗಿ ಅಭೂತ್-ಆದರೋ ಸಃ-ಅಂತಹ ಅಷ್ಟಾಪದಕಟಕ-ತಟಿತ್ಕೋಟಿಭಾಮೃಷ್ಟಕಾಷ್ಠಃ- ಅಷ್ಟಾಪದಕಟಕ-ಚಿನ್ನದ ಕಡಗಗಳ ತಟಿತ್ಕೋಟಿ-ಕೋಟಿ ಮಿಂಚುಗಳ ಭಾ-ಕಾಂತಿಯಿಂದ ಮೃಷ್ಟಿತಾಷ್ಠ-ದಿಕ್ಕುಗಳನ್ನು ಬೆಳಗಿಸುವ ರಾವಣಾರಿಪ್ರಿಯ-ನಟನಪಟುಃ-ರಾವಣಾದಿ-ರಾವಣನ ವೈರಿಯಾದ ಶ್ರೀರಾಮನಿಗೆ ಪ್ರಿಯನಟನ-ಅತ್ಯಂತ ಪ್ರಿಯವಾಗಿ ವರ್ತಿಸುವುದರಲ್ಲಿ ಪಟುಃ-ನಿಪುಣವಾದ ತೇ-ನಿನ್ನ ಮುಷ್ಟಿ-ಮುಷ್ಟಿಯು ಮೇ-ನನಗೆ ಇಷ್ಟಂ-ಅಭೀಷ್ಟವನ್ನು ಪ್ರದೇಷ್ಟುಂ-ನೀಡಲು ನೇಷ್ಟೇ ಕಿಂ-ಸಮರ್ಥ-ವಲ್ಲವೇನು ? (ಸಮರ್ಥವಾಗಿದೆ ಎಂದು ತಾತ್ಪರ್ಯ)

**ಭಾವಾರ್ಥ**- ಮುಖ್ಯಪ್ರಾಣದೇವರೇ ನಿಮ್ಮ ಮುಷ್ಟಿಯಿಂದ ರಾವಣನ ಎದೆ ಪುಡಿಪುಡಿಯಾಯಿತು. ಮೇಲಿದ್ದ ಚಿನ್ನದ ಕವಚವು ನುಚ್ಚು ನೂರಾಗಿತ್ತು. ಅವನ ಎಲುಬುಗಳು ಮುರಿದು ಬಿದ್ದವು. ನೋಡುವ ಜನಕ್ಕೆ ಬಂಗಾರದ ಪರ್ವತದ ಹೊಳೆವ ಸಮತಟ್ಟು ಜಾಗದಲ್ಲಿ ಒಂದು ಸರೋವರದಂತೆ ಕಾಣುತ್ತಿತ್ತು. ಹೀಗೆ ಯುದ್ಧದಲ್ಲಿ ರಾವಣಶತ್ರುವಾದ ಶ್ರೀರಾಮಚಂದ್ರನಿಗೆ ಸಂತೋಷನೀಡುವಂತೆ ಆಟವಾಡುವ ಕೋಟಿ ಮಿಂಚುಗಳಂತೆ ದಿಕ್ಕುಗಳನ್ನು ಬೆಳಗಿಸುವ ಹೊಳಪಿನ ಕಡಗವುಳ್ಳ ಆ ಮುಷ್ಟಿಯು ನನ್ನ ಇಷ್ಟಗಳನ್ನು ನೀಡಲು ಸಮರ್ಥವಲ್ಲವೇನು? ಸಮರ್ಥವಾಗಿವೆ ಎಂದು ಅಭಿಪ್ರಾಯ.

ದೇವ್ಯಾದೇಶಪ್ರಣೀತಿದ್ರುಹಿಣಹರವರಾವಧ್ಯರಕ್ಷೋವಿಘಾತಾ-
ದ್ಯಾಸೇವ್ಯೋದ್ಯದ್ದಯಾರ್ದ್ರಃ ಸಹಭುಜಮಕರೋದ್ರಾಮನಾಮಾ ಮುಕುಂದಃ ।
ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ
ತನ್ವನ್ ಭೂಯಃ ಪ್ರಭೂತಪ್ರಣಯವಿಕಸಿತಾಬ್ಜೇಕ್ಷಣಸ್ತ್ವೇಕ್ಷಮಾಣಃ ॥ 21 ॥

ದೇವ್ಯಾದೇಶಪ್ರಣೀತಿ ದ್ರುಹಿಣಹರವರಾವಧ್ಯ ರಕ್ಷೋವಿಘಾತಾದ್ಯಾ ಸೇವ್ಯೋ ದ್ಯದ್ದಯಾರ್ದ್ರಃ- ಸೀತಾದೇವಿಗೆ ಶ್ರೀರಾಮಚಂದ್ರನ ಸಂದೇಶವನ್ನು ಮುಟ್ಟಿಸುವದು, ಸೀತಾದೇವಿಯ ಪ್ರಾರ್ಥನೆಯಂತೆ ಶ್ರೀರಾಮಚಂದ್ರನಿಗೆ ಸೀತಾದೇವಿಯ ವಾರ್ತೆಯನ್ನು

ಮುಟ್ಟಿಸುವದು ಬ್ರಹ್ಮ-ರುದ್ರದೇವರ ವರರಿಂದ ಅವಧ್ಯರಾದ ರಾಕ್ಷಸರ ನಾಶವೇ ಮೊದಲಾಗಿರುವಂತಹ ಆರ್ದ್ರವಾದಂತಹ-ಚೆನ್ನಾಗಿ ಸೇವೆಯಿಂದ ಉಕ್ಕಿದ ದಯೆಯಿಂದ ರಾಮನೆಂಬ ಹೆಸರುಳ್ಳ ಮುಕ್ತಿಪ್ರದನಾದ ನಾರಾಯಣನು ಪ್ರಭೂತಪ್ರಣಯವಿಕಸಿತಾ-ಬ್ಜೇಕ್ಷಣಃ- ಬಹಳೇ ಇದ್ದಂತಹ ಸ್ನೇಹದಿಂದ ಅರಳಿದಂತಹ ಕಮಲದಂತೆ ಇರುವ ಕಣ್ಣುಗಳುಳ್ಳ ತ್ವಾಂ-ನಿನ್ನನ್ನು ಭೂಯಃ-ಪುನಃ ಪುನಃ ಈಕ್ಷಮಾಣಃ-ನೋಡುತ್ತ ಮೂರ್ಧ್ನಿ-ತಲೆಯ ಮೇಲೆ ಅತುಲಮ್-ಅಸದೃಶವಾದ ತನ್ನ ಕರತಲಮ್-ಅಂಗೈಯನ್ನು ವಿನ್ಯಸ್ಯ-ಇರಿಸಿ ಧನ್ಯಮ್-ಧನ್ಯನನ್ನಾಗಿ ತನ್ವನ್-ಮಾಡುತ್ತಾ ದುಷ್ಪ್ರಾಪೇ-ಇತರರಿಗೆ ಸರ್ವಥಾ ಲಭಿಸದ ಪಾರಮೇಷ್ಠ್ಯೇ-ಬ್ರಹ್ಮಪದವಿಯಲ್ಲಿ ಸಹಭುಜಮ್-ಸಹಭೋಗವುಳ್ಳವನನ್ನಾಗಿ ಅಕರೋತ್-ಮಾಡಿದನು.

**ಭಾವಾರ್ಥ**-ಹೇ ವಾಯುದೇವರೇ ಸೀತಾದೇವಿಗೆ ಶ್ರೀರಾಮಚಂದ್ರದೇವರ ಅಪ್ಪಣೆಯಂತೆ ಸಂದೇಶವನ್ನು ತಲುಪಿಸಿದವರು ನೀವು. ನಿಮ್ಮ ನಿರಂತರವಾದ ಸೇವೆಯಿಂದ ಶ್ರೀರಾಮಚಂದ್ರದೇವರು ಹರಿಸಿದ ಕರುಣೆ ಅಷ್ಟಿಷ್ಟಲ್ಲ. ಮೋಕ್ಷನೀಡುವ ಆ ಭಗವಂತ ಯಾರಿಗೂ ದೊರಕದ ಬ್ರಹ್ಮಪದವಿಯಲ್ಲಿ ನಿಮ್ಮನ್ನು ಕೂಡಿಸಿ ಸಹಭೋಗಸುಖವನ್ನೇ ನಿಮಗೆ ಕರುಣಿಸಿದ. ಅನುಪಮವಾದ ತನ್ನ ಅಂಗೈಯನ್ನು ತಲೆಯ ಮೇಲಿಟ್ಟು ಆಶೀರ್ವದಿಸಿದ. ಅರಳಿದ ತಾವರೆಗಳಂತೆ ಇರುವ ತನ್ನಕಣ್ಣುಗಳಿಂದ ನೋಟ ಬೀರಿ ಅನುಗ್ರಹಿಸಿದ.

> ಜಘ್ನೇ ನಿಘ್ನೇನ ವಿಘ್ನೋ ಬಹುಲಬಲಬಕಧ್ವಂಸನಾದ್ಯೇನ ಶೋಚ-
> ದ್ವಿಪ್ರಾನುಕ್ರೋಶಪಾಶೈರಸುವಿಧೃತಿಸುಖಸ್ಯೈಕಚಕ್ರಾಜನಾನಾಮ್ ।
> ತಸ್ಮೈ ತೇ ದೇವ ಕುರ್ಮಃ ಕುರುಕುಲಪತಯೇ ಕರ್ಮಣಾ ಚ ಪ್ರಣಾಮಾನ್
> ಕಿರ್ಮೀರಂ ದುರ್ಮತೀನಾಂ ಪ್ರಥಮಮಥ ಚ ಯೋ ನರ್ಮಣಾ ನಿರ್ಮಮಾಥ
> ॥ 22 ॥

ಹೇ ದೇವ-ಎಲೈ ವಾಯುದೇವರೇ ಶೋಚದ್ವಿಪ್ರಾನುಕ್ರೋಶ-ಪಾಶೈಃ-ದುಃಖಪಡುವಂತಹ ವಿಪ್ರ-ಬ್ರಾಹ್ಮಣರ ಅನುಕ್ರೋಶ-ಮೇಲಿನ ಕರುಣೆಯ ಪಾಶಗಳಿಗೆ ನಿಘ್ನೇನ-ಒಳಗಾದ ಯೇನ-ಯಾವ ನಿಮ್ಮಿಂದ ಬಹುಲಬಲಬಕಧ್ವಂಸನಾತ್-ಬಹಳವಾದಂತಹ ಬಲ-ಬಲದಿಂದ ಕೂಡಿದ ಬಕ-ಬಕಾಸುರನ ಧ್ವಂಸನಾತ್-ಸಂಹಾರ-ದಿಂದಾಗಿ ಏಕಚಕ್ರಾಜನಾನಾಮ್-ಏಕಚಕ್ರನಗರದಲ್ಲಿ ಇದ್ದಂತಹ ಜನರ ಅಸುವಿಧೃತಿಸುಖಸ್ಯ -ಅಸು-ಪ್ರಾಣಗಳ ವಿಧೃತಿ-ಧರಿಸುವದರಿಂದ ಹುಟ್ಟಿದಂತಹ ಸುಖಸ್ಯ-ಸುಖದ ವಿಘ್ನಃ-ವಿಘ್ನವು ಜಘ್ನೇ-ಪರಿಹರಿಸಲ್ಪಟ್ಟಿತು. ಅಥ-ಅನಂತರದಲ್ಲಿ ಯಃ-ಯಾವ ನೀವು ದುರ್ಮತೀನಾಂ-ದುಷ್ಟವಾದ ಬುದ್ಧಿಯುಳ್ಳಂತವರ ಮಧ್ಯದಲ್ಲಿ ಪ್ರಥಮಂ-ಮೊದಲಿಗನಾದ ಕಿರ್ಮೀರಂ-ಕಿರ್ಮೀರನೆಂಬ ದೈತ್ಯನನ್ನು ನರ್ಮಣಾ-ಅನಾಯಾಸವಾಗಿ

ನಿರ್ಮಮಾಥ-ಸಂಹರಿಸಿದಿರೋ ತಸ್ಮೈ-ಅಂತಹ ಕುರುಕುಲಪತಯೇ-ಕುರುಕುಲಸ್ವಾಮಿ-ಯಾದ ತೇ-ನಿಮಗೆ ವಯಂ-ನಾವು ಕರ್ಮಣಾ ಚ-ಕರ್ಮದಿಂದಲೂ ಪ್ರಣಾಮಾನ್-ನಮಸ್ಕಾರಗಳನ್ನು ಕುರ್ಮಃ-ಮಾಡುತ್ತೇವೆ.

**ಭಾವಾರ್ಥ**-ಹೇ ಪ್ರಾಣದೇವರೇ ಶೋಕಪಡುವ ಬ್ರಾಹ್ಮಣರ ಮೇಲಿನ ಅನುಕಂಪ-ದಿಂದ ಬಲಶಾಲಿಯಾದ ಬಕಾಸುರನನ್ನು ಕೊಂದವರು ನೀವು. ನಿಮ್ಮಿಂದ ಆಗ ಏಕಚಕ್ರ-ನಗರದ ಜನರು ಸುಖವಾಗಿ ಬಾಳುವಂತಾಯಿತು. ಆಮೇಲೆ ಸೇಡಿನಿಂದ ಸಂಚುಹಾಕಿದ ದುಷ್ಟರ ಮುಂದಾಳಾದ ಕಿಮ್ಮೀರರನನ್ನು ಅನಾಯಾಸವಾಗಿ ಕೊಂದು ಹಾಕಿದಿರಿ. ಕುರುವಂಶದ ರಾಜನಾಗಿ ಅವತರಿಸಿದ ನಿಮಗೆ ಕಾಯಕವಾಗಿಯೂ ಪ್ರಣಾಮಗಳನ್ನು ಸಲ್ಲಿಸುವೆ.

ನಿರ್ಮೃದ್ನನ್ನತ್ಯಯತ್ನಂ ವಿಜರವರ ಜರಾಸಂಧಕಾಯಾಸ್ಥಿಸಂಧೀನ್
ಯುದ್ಧೇ ತ್ವಂ ಸ್ವಧ್ವರೇ ವಾ ಪಶುಮಿವ ದಮಯನ್ ವಿಷ್ಣುಪಕ್ಷದ್ವಿಡೀಶಮ್ ।
ಯಾವತ್ ಪ್ರತ್ಯಕ್ಷಭೂತಂ ನಿಖಿಲಮಖಭುಜಂ ತರ್ಪಯಾಮಾಸಿಥಾಸೌ
ತಾವತ್ಯಾಽಯೋಜಿ ತೃಪ್ತ್ಯಾ ಕಿಮು ವದ ಭಗವನ್ ರಾಜಸೂಯಾಶ್ವಮೇಧೇ
॥ 23 ॥

ಹೇ ವಿಜರವರ-ದೇವಶ್ರೇಷ್ಠರಾದ ಭಗವನ್-ಪೂಜ್ಯರಾದ ವಾಯುದೇವರೇ ತ್ವಮ್-ನೀವು ಯುದ್ಧೇ-ಯುದ್ಧದಲ್ಲಿ ಯಾವತ್-ಯಾವ ಜರಾಸಂಧಕಾಯಾಸ್ಥಿ-ಸಂಧೀನ್-ಜರಾಸಂಧನ ಶರೀರದಲ್ಲಿದ್ದಂತಹ ಅಸ್ಥಿಗಳ ಸಂಧಿಗಳನ್ನು ಅತ್ಯಯತ್ನಂ-ಅನಾಯಾಸವಾಗಿ (ಅತ್ಯಂತ ಪ್ರಯತ್ನವಿಲ್ಲದೇ)ನಿರ್ಮೃದ್ನನ್-ಪುಡಿಗೈಯ್ಯುತ್ತಾ ವಿಷ್ಣುಪಕ್ಷದ್ವಿಡೀಶಂ-ವಿಷ್ಣು-ನಾರಾಯಣನ ಪಕ್ಷ-(ಸಹಾಯಭೂತರಾದಂತಹ ದೇವತೆಗಳನ್ನು) ಪಕ್ಷದವರನ್ನು ದ್ವಿಟ್-ದ್ವೇಷಿಸುವವರಿಗೆ ಒಡೆಯನಾದ ಅವನನ್ನು ಸ್ವಧ್ವರೇ-ಉತ್ತಮವಾದ ಯಜ್ಞದಲ್ಲಿ ಪಶುಮ್-ಪಶುವನ್ನು ಇವ-ಹೇಗೋ ಹಾಗೆ ದಮಯನ್-ಸಂಹರಿಸುತ್ತಾ ವಾ-ಹಾಗೂ ಪ್ರತ್ಯಕ್ಷಭೂತಂ-ಪ್ರತ್ಯಕ್ಷನೆಲಿಸಿದ್ದ ನಿಖಿಲಮಖ-ಭುಜಂ-ಸಕಲಯಜ್ಞಭೋಕ್ತೃವಾದ ಕೃಷ್ಣಂ-ಶ್ರೀಹರಿಯನ್ನು ತರ್ಪಯಾಮಾಸಿಥ-ತೃಪ್ತಿಪಡಿಸಿದಿರೋ ಅಸೌ-ಶ್ರೀಕೃಷ್ಣನು ರಾಜಸೂಯಾಶ್ವಮೇಧೇ-ರಾಜಸೂಯ ಮತ್ತು ಅಶ್ವಮೇಧಯಾಗಗಳಲ್ಲಿ ತಾವತ್ಯಾ-ಪೂರ್ವೋಕ್ತವಾದಂತಹ ತೃಪ್ತ್ಯಾ-ತೃಪ್ತಿಯಿಂದ ಆಯೋಜಿ-ಕೂಡಿಸಲ್ಪಟ್ಟವನಾಗಿ (ಕೂಡಿದವನಾದನೇ) ಕಿಮು-ಆದನೇ ವದ-ತಿಳಿಸಿರಿ.

**ಭಾವಾರ್ಥ**-ಹೇ ದೇವೋತ್ತಮರಾದ ಪೂಜ್ಯ ವಾಯುದೇವರೇ ಪ್ರಯತ್ನವೇ ಇಲ್ಲದೇ ಜರಾಸಂಧನ ದೇಹದ ಎಲಬು ಸಂದುಗಳನ್ನು ಬಗೆದೊಗೆದವರು ನೀವು. ಆ ವೈಷ್ಣವದ್ವೇಷಿಗಳ ಮುಖಂಡನನ್ನು ಯಜ್ಞದಲ್ಲಿ ಪಶುವನ್ನೆಂಬಂತೆ ಯುದ್ಧದಲ್ಲಿ ಬಲಿಕೊಟ್ಟು ಎದುರಿನಲ್ಲೇ ಇದ್ದ ಸಕಲಯಜ್ಞಭೋಕ್ತೃವಾದ ಭಗವಂತನನ್ನು ತೃಪ್ತಿಗೊಳಿಸಿದವರು.

ಶ್ರೀಕೃಷ್ಣನಿಗೆ ರಾಜಸೂಯ ಅಶ್ವಮೇಧಯಾಗಗಳಲ್ಲಿ ಆದ ಸಂತೋಷಕ್ಕಿಂತ ಹೆಚ್ಚಿನ ಸಂತೋಷ ಜರಾಸಂಧನ ಸಂಹಾರದಿಂದ ಆಯಿತು.

ಕ್ಷ್ವೇಲಾಕ್ಷೀಣಾಟ್ಟಹಾಸಂ ತವ ರಣಮರಿಹನ್ನುದ್ಗದೋದ್ದಾಮಬಾಹೋ
ಬಹ್ವಕ್ಷೋಹಿಣ್ಯನೀಕಕ್ಷಪಣಸುನಿಪುಣಂ ಯಸ್ಯ ಸರ್ವೋತ್ತಮಸ್ಯ ।
ಶುಶ್ರೂಷಾರ್ಥಂ ಚಕರ್ಥ ಸ್ವಯಮಯಮಥ ಸಂವಕ್ತುಮಾನಂದತೀರ್ಥ-
ಶ್ರೀಮನ್ನಾಮನ್ ಸಮರ್ಥಸ್ತ್ವಮಪಿ ಹಿ ಯುವಯೋಃ ಪಾದಪದ್ಮಂ ಪ್ರಪದ್ಯೇ
॥ 24 ॥

ಉದ್ಗದೋದ್ದಾಮಬಾಹೋ–ಗದೆಯನ್ನು ಹಿಡಿದಿರುವ ಶ್ರೇಷ್ಠವಾದ ತೋಳುಗಳನ್ನು ಹೊಂದಿರುವ ವಾಯುದೇವರೇ ಹೇ ಅರಿಹನ್–ಶತ್ರುಸಂಹಾರಕನಾದಂತಹ ಆನಂದತೀರ್ಥಶ್ರೀಮನ್ನಾಮನ್–ಆನಂದತೀರ್ಥ ಆನಂದತೀರ್ಥರೆಂಬ, ಶ್ರೀ–ಸಂಪತ್ತಿನಿಂದ ಕೂಡಿದ ನಾಮನ್–ಹೆಸರುಳ್ಳ ವಾಯುದೇವರೇ ಕ್ಷ್ವೇಲಾಕ್ಷೀಣಾಟ್ಟಹಾಸಂ–ಪುಷ್ಟವಾದ ದೊಡ್ಡ ನಗೆವುಳ್ಳ ಬಹ್ವಕ್ಷೋಹಿಣ್ಯನೀಕಕ್ಷಪಣಸುನಿಪುಣಂ ಬಹು–ಬಹಳವಾದಂತಹ, ಅಕ್ಷೋಹಿಣಿ–ಅಕ್ಷೋಹಿಣಿಗಳುಳ್ಳಂತಹ, ಅನೀಕ–ಸೇನೆಯ ಕ್ಷಪಣ–ನಾಶಮಾಡುವಲ್ಲಿ ಸುನಿಪುಣಂ–ಕುಶಲವಾದದ್ದನ್ನು ಸರ್ವೋತ್ತಮಸ್ಯ–ಸರ್ವೋತ್ತಮನಾದಂತಹ ಯಸ್ಯ–ಯಾವ ಪರಮಾತ್ಮನ ಸುಶ್ರೂಶಾರ್ಥಂ–ಸೇವೆಗೋಸ್ಕರ ಚಕರ್ಥ–ಮಾಡಿದಿರಿ ತವ–ನಿನ್ನ ಸಂಬಂಧಿಯಾದ ಇಹ–ಈ ಯುದ್ಧವಿಷಯದಲ್ಲಿ ಅಯಂ–ಈ ಪರಮಾತ್ಮನು ಸಂವಕ್ತುಂ–ಚೆನ್ನಾಗಿ ಬಣ್ಣಿಸಲು ಸ್ವಯಂ–ತಾನು ಸಮರ್ಥಃ–ಸಮರ್ಥನು ತ್ವಮಪಿ–ನೀವೂ ಸಮರ್ಥಃ–ಸಮರ್ಥರು ಅಹಂ–ನಾನು ಯುವಯೋಃ–ನಿಮ್ಮಿಬ್ಬರ ಪಾದಪದ್ಮಂ–ಪಾದಕಮಲವನ್ನು ಪ್ರಪದ್ಯೇ–ಹೊಂದುತ್ತೇನೆ.

**ಭಾವಾರ್ಥ**– ಹೇ ಶತ್ರುಸಂಹಾರಕರೇ, ದೊಡ್ಡ ಗದೆಯನ್ನು ಹಿಡಿದು ಸುತ್ತ ತಿರುಗಿಸುತ್ತ, ಘರ್ಜನೆಯಿಂದ ಅಟ್ಟಹಾಸವನ್ನು ಮಾಡುತ್ತಾ ಸರ್ವೋತ್ತಮನಾದ ಭಗವಂತನ ಸೇವೆ ಎಂಬುದಾಗಿ ಭಾವಿಸಿ ಬಹಳಷ್ಟು ಅಕ್ಷೋಹಿಣಿಸೇನೆಗಳನ್ನು ನಾಶಗೊಳಿಸಿದವರು ನೀವು. ಅಂಥ ಕಾಳಗವನ್ನು ಬಣ್ಣಿಸಲು ಭಗವಂತನಿಗೆ ಹಾಗೂ ಆನಂದತೀರ್ಥರೆಂದು ಪ್ರಸಿದ್ಧರಾದ ನಿಮಗೆ ಮಾತ್ರ ಸಾಧ್ಯವು. ನಾನು ನಿಮ್ಮಿಬ್ಬರ ಪಾದಪದ್ಮಗಳನ್ನು ಆಶ್ರಯಿಸಿದವನು ಮಾತ್ರ.

ದ್ರುಹ್ಯಂತೀಂ ಹೃದ್ರುಹಂ ಮಾಂ ದ್ರುತಮನಿಲಬಲಾದ್ದ್ರಾವಯಂತೀಮವಿದ್ಯಾ-
ನಿದ್ರಾಂ ವಿದ್ರಾವ್ಯ ಸದ್ಯೋರಚನಪಟುಮಥಾಪಾದ್ಯ ವಿದ್ಯಾಸಮುದ್ರ ।
ವಾಗ್ದೇವೀ ಸಾ ಸುವಿದ್ಯಾದ್ರವಿಣದವಿದಿತಾ ದ್ರೌಪದೀ ರುದ್ರಪತ್ನ್ಯಾ-
ದ್ಯುದ್ರಿಕ್ತಾ ದ್ರಾಗಭದ್ರಾದ್ರಹಯತು ದಯಿತಾ ಪೂರ್ವಭೀಮಾಜ್ಞಯಾ ತೇ॥25॥

ಹೇ ವಿದ್ಯಾಸಮುದ್ರ–ವಿದ್ಯಾಸಾಗರರಾದ ಸುವಿದ್ಯಾದ್ರವಿಣದ–ಸು–ಶ್ರೇಷ್ಠವಾದ ವಿದ್ಯಾ–ಆಧ್ಯಾತ್ಮವಿದ್ಯೆಗಳೆಂಬ ದ್ರವಿಣದ–ಸಂಪತ್ತನ್ನು ಕೊಡುವಂತಹ ಪೂರ್ವಭೀಮ–ಹಿಂದೆ

ಭೀಮನಾಗಿದ್ದ ಹೇ ಅನಿಲ–ಎಲೈ ವಾಯುದೇವರೇ ತೇ–ನಿಮ್ಮ ಆಜ್ಞಯಾ–ಆಜ್ಞೆಯಿಂದ ದ್ರೌಪದೀತಿ–ದ್ರೌಪದೀಯೆಂದು ವಿದಿತಾ–ಪ್ರಸಿದ್ಧಳಾದ ರುದ್ರ–ರುದ್ರದೇವರ ಪತ್ನಿ–ಹೆಂಡತಿಯಾದ ಉಮಾಮೊದಲಾದವರಿಗಿಂತ ಉತ್ತಮರಾದ ಯಾ–ಯಾವ ತೇ–ನಿನ್ನ ವಾಗ್ದೇವೀ–ವಾಗಾಭಿಮಾನಿನಿಯಾದಂತಹ ದಯಿತಾ–ಪತ್ನಿಯಾದ ಭಾರತೀದೇವಿಯು ಮಾಂ–ನನ್ನನ್ನು ದ್ರಾವಯಂತೀಂ–ಸೆಳೆಯುತ್ತಿರುವ ಹೃದ್ರುಹಂ–ಹೃತ್–ಹೃದಯದಲ್ಲಿ ರುಹಂ–ಬೆಳೆದಂತಹ ದ್ರುಹ್ಯಂತೀಮ್–ದ್ರೋಹವೆಸಗುತ್ತಿರುವ ಅವಿದ್ಯಾನಿದ್ರಾಂ–ಅಜ್ಞಾನವೆಂಬ ನಿದ್ರೆಯನ್ನು ದ್ರುತಂ–ಶೀಘ್ರವಾಗಿ ವಿದ್ರಾವ್ಯ–ಓಡಿಸಿ ಮಾಂ–ನನ್ನನ್ನು ಸದ್ಯೋರಚನಪಟುಂ–ಆಶುಕೃತಿಗಳನ್ನು ರಚಿಸುವ ನಿಪುಣನನ್ನಾಗಿ ಆಪಾದ್ಯ–ಮಾಡಿ ದ್ರಾಕ್–ಶೀಘ್ರವಾಗಿ ಅಭದ್ರಾತ್–ಅನಿಷ್ಟಗಳಿಂದ ರಹಯತು–ದೂರಮಾಡಲಿ.

**ಭಾವಾರ್ಥ**– ಸದ್ವಿದ್ಯೆ ಎಂಬ ಸಂಪತ್ತು ನೀಡುವ, ಸದ್ವಿದ್ಯೆಯ ಸಮುದ್ರದಂತೆ ಇರುವ ಹಿಂದೆ ಭೀಮರೂಪವನ್ನು ಧರಿಸಿದ ಪ್ರಾಣದೇವರೆ ನಿಮ್ಮ ಪ್ರೀತಿಪಾತ್ರಳಾದ ದ್ರೌಪದಿ–ಯೆಂದು ಪರಿಚಿತಳಾದ ವಾಗ್ದೇವತೆಗೆ ಅಪ್ಪಣೆ ಮಾಡಿರಿ. ರುದ್ರಪತ್ನಿ ಪಾರ್ವತಿ ಮುಂತಾ–ದವರಿಗಿಂತ ಉತ್ತಮಳಾದ ಆ ದೇವತೆಯು ಎನ್ನೊಳಗೆ ಬೆಳೆದು ಬಲವಂತವಾಗಿ ನನ್ನನ್ನೇ ಅಲೆಸುತ್ತ ದ್ರೋಹಬಗೆದ ಅವಿದ್ಯೆಯ ನಿದ್ದೆಯನ್ನು ಬೇಗ ಒದ್ದೋಡಿಸಲಿ. ಹಾಗೂ ನನಗೆ ಆಶುಕವಿತೆಯ ಕಲೆಯಲ್ಲಿ ಜಾಣತನವನ್ನು ಕರುಣಿಸಲಿ. ಮತ್ತೆ ಈ ಕೂಡಲೇ ಎಲ್ಲ ಅನಿಷ್ಟಗಳಿಂದ ನನ್ನನ್ನು ದೂರಮಾಡಲಿ.

> ಯಾಭ್ಯಾಂ ಶುಶ್ರೂಷುರಾಸೀಃ ಕುರುಕುಲಜನನೇ ಕ್ಷತ್ರವಿಪ್ರೋದಿತಾಭ್ಯಾಂ
> ಬ್ರಹ್ಮಭ್ಯಾಂ ಬೃಂಹಿತಾಭ್ಯಾಂ ಚಿತಿಸುಖವಪುಷಾ ಕೃಷ್ಣನಾಮಾಸ್ಪದಾಭ್ಯಾಮ್ ।
> ನಿರ್ಭೇದಾಭ್ಯಾಂ ವಿಶೇಷಾದ್ದ್ವಿವಚನವಿಷಯಾಭ್ಯಾಮುಭಾಭ್ಯಾಮಮೂಭ್ಯಾಂ
> ತುಭ್ಯಂ ಚ ಕ್ಷೇಮದೇಭ್ಯಃ ಸರಸಿಜವಿಲಸಲ್ಲೋಚನೇಭ್ಯೋ ನಮೋಽಸ್ತು ॥ 26 ॥

ಹೇ ವಾಯೋ–ವಾಯುದೇವರೇ ಕುರುಕುಲಜನನೇ–ಕುರುಕುಲದಲ್ಲಿ ಜನಿಸಿದಾಗ ಕ್ಷತ್ರವಿಪ್ರೋದಿತಾಭ್ಯಾಂ–ಕ್ಷತ್ರ–ಕ್ಷತ್ರಿಯ, ವಿಪ್ರ–ಬ್ರಾಹ್ಮಣ ಕುಲದಲ್ಲಿ ಉದಿತಾಭ್ಯಾಂ –ಅವತರಿಸಿದ ಚಿತಿಸುಖವಪುಷಾ–ಜ್ಞಾನಾನಂದಾತ್ಮಕವಾದಂತಹ ಶರೀರದಿಂದ ಕೂಡಿದ ಬೃಂಹಿತಾಭ್ಯಾಂ–ಅಭಿವೃದ್ಧವಾದಂತಹ ಕೃಷ್ಣನಾಮಾಸ್ಪದಾಭ್ಯಾಂ–ಕೃಷ್ಣನೆಂಬ ಹೆಸರಿಗೆ ಆಶ್ರಯರಾದಂತಹ ನಿರ್ಭೇದಾಭ್ಯಾಂ–ಭೇದರಹಿತರಾದ ವಿಶೇಷಾತ್–ವಿಶೇಷಬಲದಿಂದ ದ್ವಿವಚನವಿಷಯಾಭ್ಯಾಂ– ದ್ವಿವಚನವ್ಯವಹಾರವಿಷಯರಾದಂತಹ ಯಾಭ್ಯಾಂ–ಯಾವ ಉಭಾಭ್ಯಾಂ–ಇಬ್ಬರಾದ ಬ್ರಹ್ಮಭ್ಯಾಂ–ಬ್ರಹ್ಮಶಬ್ದವಾಚ್ಯರಾದ ಅಮೂಭ್ಯಾಂ–ಈ ಪ್ರತ್ಯಕ್ಷಸಿದ್ಧವಾದ ನಿಮ್ಮಿಬ್ಬರಿಗೋಸ್ಕರ ಚ–ಮತ್ತು ತುಭ್ಯಮ್–ನಿಮಗೂ ಕ್ಷೇಮದೇಭ್ಯಃ–ಸುಖವನ್ನು ಕೊಡುವಂತಹ ಸರಸಿಜವಿಲಸಲ್ಲೋಚನೇಭ್ಯಃ–ಸರಸಿಜ–ಕಮಲದಂತೆ ವಿಲಸತ್–ಅರಳಿದ ಲೋಚನೇಭ್ಯಃ–ಕಣ್ಣುಗಳುಳ್ಳಂತಹ ಕೃಷ್ಣ–ವ್ಯಾಸರಿಗೆ ಹಾಗೂ ನಿಮಗೆ ನಮಃ–ನಮಸ್ಕಾರವು ಅಸ್ತು–ಇರಲಿ.

**ಭಾವಾರ್ಥ**- ಹೇ ಪ್ರಾಣದೇವರೇ ಕುರುವಂಶದಲ್ಲಿ ಜನಿಸಿದಾಗ ನೀವು ಬ್ರಾಹ್ಮಣನಾಗಿ ಕ್ಷತ್ರಿಯನಾಗಿ ಅವತರಿಸಿದ ಭಗವಂತನ ಎರಡೂ ರೂಪಗಳ ಸೇವೆಯನ್ನು ಮಾಡಿದವರಾಗಿದ್ದೀರಿ. ಜ್ಞಾನಾನಂದಮಯವಾಗಿ ಅಭಿವೃದ್ಧವಾದ ಆ ರೂಪಗಳ ಸೇವೆಯನ್ನು ಮಾಡಿದವರಾಗಿದ್ದೀರಿ. ಜ್ಞಾನಾನಂದಮಯವಾಗಿ ಅಭಿವೃದ್ಧವಾದ ಆ ರೂಪಗಳು ಬ್ರಹ್ಮ ಎಂದೇ ಪ್ರಸಿದ್ಧವಾಗಿವೆ. ಎರಡು ರೂಪಗಳಿಗೂ ಕೃಷ್ಣ ಎಂದೇ ಹೆಸರಿದೆ. ಇಬ್ಬರಲ್ಲಿಯೂ ಭೇದವಿಲ್ಲ. ವಿಶೇಷ ಬಲದಿಂದ ಅವರಲ್ಲಿ ದ್ವಿವಚನಪ್ರಯೋಗವನ್ನು ಮಾಡಲಾಗಿದೆ. ಇಂಥ ರೂಪಗಳಿಗೆ ಹಾಗೂ ಅವರನ್ನು ಸೇವಿಸುವ ಭೀಮರೂಪಿಯಾದ ನಿಮಗೆ ನನ್ನ ನಮಸ್ಕಾರಗಳು. ಕಮಲದಂತೆ ಅರಳಿದ ಕಣ್ಣುಗಳುಳ್ಳ ಸುಖನೀಡುವ ಶ್ರೀಕೃಷ್ಣ-ವ್ಯಾಸ ಭೀಮಸೇನದೇವರಿಗೆ ನನ್ನ ನಮಸ್ಕಾರಗಳು.

**ಗಚ್ಛನ್ ಸೌಗಂಧಿಕಾರ್ಥಂ ಪಥಿ ಸ ಹನುಮತಃ ಪುಚ್ಛಮಚ್ಛಸ್ಯ ಭೀಮಃ**
**ಪ್ರೋದ್ಧರ್ತುಂ ನಾಶಕತ್ ಸ ತ್ವಮುಮುರುವಪುಷಾ ಭೀಷಯಾಮಾಸ ಚೇತಿ ।**
**ಪೂರ್ಣಜ್ಞಾನೌಜಸೋಸ್ತೇ ಗುರುತಮವಪುಷೋಃ ಶ್ರೀಮದಾನಂದತೀರ್ಥ**
**ಕ್ರೀಡಾಮಾತ್ರಂ ತದೇತತ್ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಮ್॥27॥**

ಸುಧಿಯಾಮ್-ಜ್ಞಾನಿಗಳಿಗೆ ಪ್ರಮದದ-ವಿಶೇಷವಾದ ಆನಂದವನ್ನು ನೀಡುವ ದ್ವೇಷಭಾಜಾಮ್-ದ್ವೇಷಿಗಳಿಗೆ ಮೋಹಕ-ಮೋಹನ ಮಾಡುವ ಶ್ರೀಮದಾನಂದತೀರ್ಥ-ಶ್ರೀಮದಾನಂದತೀರ್ಥರೇ ನೀವು ಸೌಗಂಧಿಕಾರ್ಥಂ-ಸೌಗಂಧಿಕಾಪುಷ್ಪನಿಮಿತ್ತವಾಗಿ ಗಚ್ಛನ್-ಹೋಗುತ್ತಿರುವಾಗ ಪಥಿ-ಮಾರ್ಗದಲ್ಲಿ ಅಚ್ಛಸ್ಯ-ನಿರ್ಮಲವಾದ ಹನುಮತಃ-ಹನುಮಂತನ ಪುಚ್ಛಂ-ಬಾಲವನ್ನು ಸಃ-ಪೂರ್ವೋಕ್ತನಾದ ಭೀಮಃ-ಭೀಮಸೇನನು ಪ್ರೋದ್ಧರ್ತುಂ-ಎತ್ತುವದಕ್ಕೋಸ್ಕರ ನಾಶಕತ್-ಶಕ್ತನಾಗಲಿಲ್ಲ. ಸಃ-ಹನುಮಂತನು ಅಮುಂ -ಭೀಮಸೇನನನ್ನು ಉರುವಪುಷಾ-ತನ್ನ ದೊಡ್ಡ ಶರೀರದಿಂದ ಭೀಷಯಾಮಾಸ-ಅಂಜಿಸಿದನು. ಇತಿ ಯತ್-ಹೀಗೆ ಎಂಬುದು ಯಾವುದು ಇದೆಯೋ ಏತತ್-ಇದು ಪೂರ್ಣಜ್ಞಾನೌಜಸೋಃ-ಪರಿಪೂರ್ಣಜ್ಞಾನ ಬಲವುಳ್ಳಂತಹ ಗುರುತಮವಪುಷೋಃ-ಎರಡು ಅತ್ಯಂತ ಶ್ರೇಷ್ಠವಾದ ಅವತಾರರೂಪಗಳ ಕ್ರೀಡಾಮಾತ್ರಂ- ಕೇವಲ ಕ್ರೀಡೆಯಷ್ಟೇ.

**ಭಾವಾರ್ಥ**-ಗುರುಶ್ರೇಷ್ಠರಾದ ಶ್ರೀಮದಾನಂದತೀರ್ಥರೇ ನೀವು ತತ್ತ್ವಜ್ಞಾನಿಗಳಿಗೆ ಆನಂದವನ್ನು ದ್ವೇಷಿಸುವ ದುರ್ಜನರಿಗೆ ಮೋಹವನ್ನು ನೀಡುವವರು. ನೀವು ಭೀಮನಾಗಿ ಅವತರಿಸಿದಾಗ, ಒಮ್ಮೆ ಭೀಮಸೇನದೇವರು ಸೌಗಂಧಿಕಾಪುಷ್ಪವನ್ನು ತರಲು ಹೋಗುವಾಗ ದಾರಿಯಲ್ಲಿ ಪರಮಶುದ್ಧರಾದ ಹನುಮಂತದೇವರ ಬಾಲವನ್ನು ಅಲ್ಲಾಡಿಸಲೂ ಆಗಲಿಲ್ಲ. ಮತ್ತೆ ಆ ಹನುಮಂತದೇವರು ದೊಡ್ಡ ರೂಪವನ್ನು ಧರಿಸಿ ಭಯಗೊಳಿಸಿದರು. ಹೇ ಶ್ರೀಮದಾನಂದತೀರ್ಥರೇ ಇವೆರಡೂ ಪೂರ್ಣಜ್ಞಾನ ಬಲಾತ್ಮಕವಾದ ಆ ನಿಮ್ಮ ಎರಡು ರೂಪಗಳ ಕೇವಲ ಲೀಲೆಯಷ್ಟೇ.

ಬಹ್ವೀಃ ಕೋಟೀರಟೀಕಃ ಕುಟಿಲಕಟುಮತೀನುತ್ಕಟಾಟೋಪಕೋಪಾನ್
ದ್ರಾಕ್ ಚ ತ್ವಂ ಸತ್ವರತ್ವಾಚ್ಛರಣದ ಗದಯಾ ಪೋಥಯಾಮಾಸಿಥಾರೀನ್ ।
ಉನ್ಮಥ್ಯಾತಥ್ಯಮಿಥ್ಯಾತ್ವವಚನವಚನಾನುತ್ಪಥಸ್ಥಾಂಸ್ತಥಾऽನ್ಯಾನ್
ಪ್ರಾಯಚ್ಛಃ ಸ್ವಪ್ರಿಯಾಯೈ ಪ್ರಿಯತಮ ಕುಸುಮಂ ಪ್ರಾಣ ತಸ್ಮೈ ನಮಸ್ತೇ ॥28॥

ಹೇ ಶರಣದ-ರಕ್ಷಣೆ ಮಾಡುವಂತಹ ಪ್ರಾಣ-ಎಲೈ ಮುಖ್ಯಪ್ರಾಣನೇ ಯಸ್ತ್ವಂ-ಯಾವ ನೀನು ಬಹ್ವೀಃ-ಬಹಳ ಕೋಟೀಃ-ಕೋಟಿಸಂಖ್ಯಾಕರಾದ ಕುಟಿಲಕಟು-ಮತೀನ್-ಕುಟಿಲ-ಡೊಂಕಾಗಿ ಇದ್ದಂತಹ ಕಟು-ತೀಕ್ಷ್ಣವಾದ ಮತೀನ್-ಬುದ್ಧಿಯುಳ್ಳ, ಉತ್ಕಟಾಟೋಪಕೋಪಾನ್-ಉತ್ಕಟ ಅಭಿವೃದ್ಧವಾದಂತಹ, ಆಟೋಪಕೋಪಾನ್-ಕೋಪವುಳ್ಳಂತಹ ಅರೀನ್-ವೈರಿಗಳನ್ನು ದ್ರಾಕ್-ಶೀಘ್ರದಲ್ಲಿಯೇ ಅಟೀಕಃ-ಹೊಂದಿದಿರಿ. ತಥಾ-ಹಾಗೆಯೇ ಗದಯಾ-ಗದೆಯಿಂದ ಪೋಥಯಾಮಾಸಿಥ-ಕೊಂದಿರಿ. ಉತ್ಪಥಸ್ಥಾನ್-ದುರ್ಮಾರ್ಗದಲ್ಲಿ ಇದ್ದಂತಹ ಅತಥ್ಯಮಿಥ್ಯಾತ್ವವಚನ-ವಚನಾನ್-ಅಯತಾರ್ಥವಾದ ಮಿಥ್ಯಾತ್ವ- ಮಿಥ್ಯಾತ್ವವನ್ನು ವಚನ-ಪ್ರತಿಪಾದಿಸುವಂತಹ ವಚನಾನ್-ವಾಕ್ಯಗಳುಳ್ಳ ಅನ್ಯಾನ್-ಮತ್ತೆ ಕೆಲವರನ್ನು ಸತ್ವರತ್ವಾತ್-ಶೀಘ್ರವಾಗಿ ಉನ್ಮಥ್ಯ-ಮರ್ದಿಸಿ ಸ್ವಪ್ರಿಯಾಯೈ-ತನ್ನ ಮಡದಿಯಾದಂತಹ ದ್ರೌಪದಿಗೋಸ್ಕರ ಪ್ರಿಯತಮಕುಸುಮಂ-ಅತ್ಯಂತ ಪ್ರೀತಿವಿಷಯಕವಾದ ಸೌಗಂಧಿಕಾಪುಷ್ಪವನ್ನು ಪ್ರಾಯಚ್ಛಃ-ಕೊಟ್ಟಿರುವೆ ತಸ್ಮೈ-ಅಂತಹ ತೇ-ನಿಮಗೆ ನಮಃ-ನಮಸ್ಕಾರವು.

ಭಾವಾರ್ಥ-ಹೇ ಪ್ರಾಣದೇವರೇ ಕುಟಿಲವೂ ಕ್ರೂರವೂ ಆದ ಬುದ್ಧಿಯುಳ್ಳ ಅತಿಯಾಗಿ ಹಾರಾಡುವ ಕ್ರೋಧವಶರೆಂಬ ಅನೇಕ ಕೋಟಿ ಸಂಖ್ಯೆಯ ಶತ್ರುಗಳನ್ನು ಕೊಲ್ಲಲು ಬಂದವರು ನೀವು. ಅಂತೆಯೇ ದೊಡ್ಡ ಗದೆಯಿಂದ ಅವರನ್ನು ಕೊಂದು-ಹಾಕಿರಿ. ಇದಲ್ಲದೆ ಎಲ್ಲವೂ ಮಿಥ್ಯೆಯೆಂದು ಮಾತಾಡುವ ದಾರಿ ಮೀರಿ ಹೋಗುವ ಇತರ ಎಲ್ಲ ದುಷ್ಟರನ್ನೂ ಬಗ್ಗುಬಡೆದು ತನ್ನ ಪ್ರಿಯಳಾದ ದ್ರೌಪದೀದೇವಿಗೆ ಬಹಳ ಪ್ರಿಯವಾದ ಹೂವನ್ನು ನೀಡಿದವರು. ಅಂತಹ ನಿಮಗೆ ಪ್ರಣಾಮಗಳು.

ದೇಹಾದುತ್ಕ್ರಾಮಿತಾನಾಮಧಿಪತಿರಸತಾಮಕ್ರಮಾದ್ವಕ್ರಬುದ್ಧಿಃ
ಕ್ರುದ್ಧಃ ಕ್ರೋಧೈಕವಶ್ಯಃ ಕೃಮಿರಿವ ಮಣಿಮಾನ್ ದುಷ್ಕೃತೀ ನಿಷ್ಕ್ರಿಯಾರ್ಥಮ್ ।
ಚಕ್ರೇ ಭೂಚಕ್ರಮೇತ್ಯ ಕ್ರಕಚಮಿವ ಸತಾಂ ಚೇತಸಃ ಕಷ್ಟಶಾಸ್ತ್ರಂ
ದುಸ್ತರ್ಕಂ ಚಕ್ರಪಾಣೇರ್ಗುಣಗಣವಿರಹಂ ಜೀವತಾಂ ಚಾಧಿಕೃತ್ಯ ॥ 29 ॥

ದೇಹಾತ್-ದೇಹದಿಂದ ಅಕ್ರಮಾತ್-ಕ್ರಮರಾಹಿತ್ಯದಿಂದ ಉತ್ಕ್ರಾಮಿತಾನಾಂ-ಮರಣವನ್ನು ಹೊಂದಿದ ಅಸತಾಂ-ಅಸಜ್ಜನರಿಗೆ ಅಧಿಪತಿಃ-ಒಡೆಯರಾದ ವಕ್ರಬುದ್ಧಿಃ-ಕುಟಿಲ ಬುದ್ಧಿಯುಳ್ಳ ಕ್ರುದ್ಧಃ-ಕುಪಿತನಾದ ಕ್ರಿಮಿರಿವ-ಕ್ರಿಮಿಯಂತೆ ಕ್ರೋಧವಶ್ಯಃ-ಕೋಪಕ್ಕೆ ಮುಖ್ಯವಾಗಿ ವಶ್ಯರಾದಂತಹ ದುಷ್ಕೃತಿಃ-ಪಾಪಿಷ್ಠನಾದ ಮಣಿಮಾನ್-

ಮಣಿಮಂತನೆಂಬ ದೈತ್ಯನು ನಿಷ್ಕ್ರಿಯಾರ್ಥಂ-ಪ್ರತೀಕಾರ ಮಾಡುವದಕ್ಕಾಗಿ ಭೂಚಕ್ರಂ-ಭೂಮಂಡಲವನ್ನು ಏತ್ಯ-ಹೊಂದಿ ಚಕ್ರಪಾಣೇಃ-ನಾರಾಯಣನಿಗೆ ಗುಣಗಣವಿರಹಂ-ಗುಣಸಮುದಾಯಗಳ ವಿಯೋಗವನ್ನು ಜೀವತಾಂ-ಜೀವನಿಂದ ಐಕ್ಯವನ್ನು ಅಧಿಕೃತ್ಯ-ಕುಯುಕ್ತಿಗಳನ್ನು ಹಾಕುತ್ತಾ ಸತಾಂ-ಸಜ್ಜನರ ಚೇತಸಃ-ಅಂತಃಕರಣಕ್ಕೆ ಕ್ರಕಚಮಿವ-ಕರಗಸದೋಪಾಧಿಯಲ್ಲಿ ದುಸ್ತರ್ಕಂ-ದುಷ್ಟವಾದ ತರ್ಕವುಳ್ಳ ಕಷ್ಟಶಾಸ್ತ್ರಂ-ಕಠಿಣಶಾಸ್ತ್ರವನ್ನು ಚಕ್ರೇ-ಮಾಡಿದನು.

**ಭಾವಾರ್ಥ-** ದುಷ್ಟರಿಗೆ ಮುಖಂಡನಾದ ಪಾಪಿಷ್ಟನಾದ ಮಣಿಮಂತ ಕುಟಿಲವಾಗಿ ಸಂಚುಹಾಕಿದನು. ಸಿಟ್ಟಿನಿಂದ ಸೇಡುತೀರಿಸಿಕೊಳ್ಳಲು ಭೂಮಿಯಲ್ಲಿ ಹುಳದಂತೆ ಹುಟ್ಟಿಬಿಟ್ಟನು. ಭಗವಂತನಿಗೆ ಗುಣಗಳಿಲ್ಲ ಎಂದು, ಜೀವನಿಂದ ಐಕ್ಯವಿದೆ ಎಂದು ಕುಯುಕ್ತಿಗಳನ್ನು ಹೇಳುತ್ತ ಸಜ್ಜನರ ಮನಸ್ಸಿಗೆ ಗರಗಸದಂತಾದ ಕೆಟ್ಟ ಮತವನ್ನು ಹರಡಿದನು.

ತದ್ದುಷ್ಪ್ರೇಕ್ಷಾನುಸಾರಾತ್ ಕತಿಪಯಕುನರೈರಾದೃತೋಽನ್ಯೈರ್ವಿಸೃಷ್ಟೋ
ಬ್ರಹ್ಮಾಽಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ ।
ತದ್ಯುಕ್ತ್ಯಾಭಾಸಜಾಲಪ್ರಸರವಿಷತರೂದ್ದಾಹದಕ್ಷಪ್ರಮಾಣ-
ಜ್ವಾಲಾಮಾಲಾಧರೋಽಗ್ನಿಃ ಪವನ ವಿಜಯತೇ ತೇಽವತಾರಸ್ತೃತೀಯಃ॥ 30 ॥

ಅಹಂ-ನಾನು ಬ್ರಹ್ಮ-ಪರಬ್ರಹ್ಮನು ಅಹಂ-ನಾನು ನಿರ್ಗುಣಃ-ಗುಣರಹಿತನು ಇದಂ-ಈ ಜಗತ್ತು ವಿತಥಂ-ಮಿಥ್ಯೆಯು ಇತಿ ಹೀಗೆ ಎಂಬ ಏಷಃ-ಪ್ರಸಿದ್ಧವಾದ ಪಾಷಂಡವಾದಃ-ಮಿಥ್ಯಾಪ್ರಲಾಪವು ತದ್ದುಷ್ಪ್ರೇಕ್ಷಾನುಸಾರಾತ್-ತತ್-ಯಾವ ಸಂಕರನ ದುಷ್ಪ್ರೇಕ್ಷಾತ್-ದುಷ್ಟಜ್ಞಾನದ ಅನುಸಾರಾತ್-ಅನುಸರಣೆಯಿಂದ ಕತಿಪಯ-ಕುನರೈಃ-ಕತಿಪಯ-ಕೆಲವು ಕುನರೈಃ-ಕುತ್ಸಿತಜನರಿಂದ ಆದೃತಃ-ಅಂಗೀಕರಿಸಲ್ಪಟ್ಟಿತು ಅನ್ಯೈಃ-ಕೆಲವರಿಂದ ವಿಸೃಷ್ಟಃ-ಬಿಡಲ್ಪಟ್ಟಿತು. ಹೇ ಪವನ-ಎಲೈ ವಾಯುದೇವರೇ ತತ್-ಆ ಸಂಕರನ ಯುಕ್ತ್ಯಾಭಾಸಜಾಲಪ್ರಸರವಿಷತರೂದ್ದಾಹದಕ್ಷಪ್ರಮಾಣಜ್ವಾಲಾಮಾಲಾಧರಃ-ಯುಕ್ತ್ಯಾಭಾಸಃ-ಆಭಾಸಯುಕ್ತಿಗಳ, ಜಾಲ-ಸಮೂಹದಿಂದ ಪ್ರಸರ-ಹರಡಿದ ವಿಷತರು-ವಿಷವೃಕ್ಷದ ಉದ್ದಾಹ-ಚೆನ್ನಾಗಿಸುವಲ್ಲಿ ದಕ್ಷ-ಸಮರ್ಥವಾದ ಪ್ರಮಾಣ-ಪ್ರಮಾಣಗಳು ಎಂಬ ಜ್ವಾಲಾ-ಉರಿಗಳೆಂಬ ಮಾಲಾ-ಮಾಲಿಕೆಗಳನ್ನು ಧರಃ-ಧರಿಸಿಕೊಂಡ ತೇ-ನಿನ್ನ ತೃತೀಯಃ-ಮೂರನೆಯದಾದ ಅವತಾರಃ-ಅವತಾರವು ಅಗ್ನಿರಿವ-ಯಜ್ಞಪುರುಷ-ನೋಪಾಧಿಯಲ್ಲಿ ವಿಜಯತೇ-ಉತ್ಕೃಷ್ಟವಾಗಿದೆ.

**ಭಾವಾರ್ಥ**-ನಾನೇ ಬ್ರಹ್ಮ, ಬ್ರಹ್ಮನಾದರೂ ನಿರ್ಗುಣ. ಪ್ರಪಂಚವೆಲ್ಲ ಸುಳ್ಳು. ಎಂಬ ಆ ಮಣಿಮಂತನ ಪಾಷಂಢಮತವನ್ನು ಕೆಲವರು ಹಿಂಬಾಲಿಸಿದರು. ಮತ್ತೆ ಕೆಲವರು ಹಿಂಬಾಲಿಸಲಿಲ್ಲ. ಹೇ ವಾಯುದೇವರೆ ಆ ಮಣಿಮಂತನು ಹರಡಿದ ರಾಶಿರಾಶಿ ಕುಯುಕ್ತಿಗಳೆಂಬ ವಿಷವೃಕ್ಷವನ್ನು ಚೆನ್ನಾಗಿ ಸುಟ್ಟು ಭಸ್ಮಮಾಡಲು ನಿಮ್ಮ ಮೂರನೆಯ

ಅವತಾರವು ಬಹು ಸಮರ್ಥವಾಗಿದೆ. ಪ್ರಮಾಣಗಳೆಂಬ ಜ್ವಾಲೆಗಳ ಸರಮಾಲೆಯನ್ನು ಹೊತ್ತು ಕಾಡ್ಗಿಚ್ಚಿನ ಬೆಂಕಿಯಂತೆ ಕಂಗೊಳಿಸುತ್ತಿದೆ.

ಆಕ್ರೋಶಂತೋ ನಿರಾಶಾ ಭಯಭರವಿವಶಸ್ವಾಶಯಾಚ್ಛಿನ್ನದರ್ಪಾ
ವಾಶಂತೋ ದೇಶನಾಶಸ್ತ್ವಿತಿ ಬತ ಕುಧಿಯಾಂ ನಾಶಮಾಶಾದಶಾಶು ।
ಧಾವನ್ತೋಽಶ್ಲೀಲಶೀಲಾ ವಿತಥಶಪಥಶಾಪಾಶಿವಾಃ ಶಾಂತಶೌರ್ಯಾ-
ಸ್ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಸ್ತೇ ॥31॥

ಹೇ ಶ್ರೀಮದಾನಂದತೀರ್ಥ-ಹೇ ಮಧ್ವಾಚಾರ್ಯರೇ ತ್ವದ್ವ್ಯಾಖ್ಯಾಸಿಂಹನಾದೇ ತ್ವತ್-ನಿಮ್ಮ ವ್ಯಾಖ್ಯಾಸಿಂಹನಾದೇ-ವಾಖ್ಯಾನವೆಂಬ ಸಿಂಹಧ್ವನಿಯು ಶ್ರೂಯಮಾಣೇ ಸತಿ-ಕೇಳುತ್ತಿರಲು ತೇ-ಪೂರ್ವೋಕ್ತವಾದಂತಹ ಮಾಯಿಗೋಮಾಯವಃ-ಮಾಯಾವಾದಿಗಳೆಂಬ ನರಿಗಳು ಸಪದಿ-ಆ ಕ್ಷಣದಲ್ಲಿ ಆಕ್ರೋಶಂತಃ-ಪರಸ್ಪರವಾಗಿ ಸಿಟ್ಟು ಮಾಡುತ್ತ ನಿರಾಶಾಃ-ಹೋಗಲ್ಪಟ್ಟ ಆಶೆವುಳ್ಳಂತಹ ಭಯಭರವಿವಶಸ್ವಾಶಯಾ-ಛಿನ್ನದರ್ಪಾಃ-ಭಯ-ಅಂಜಿಕೆಯ ಭರ-ಭಾರದಿಂದ ವಿವಶಾ-ಪರವಶರಾದ ಸ್ವ-ತಮ್ಮ ಆಶಯಾಃ-ಅಭಿಪ್ರಾಯವುಳ್ಳ ಛಿನ್ನ- ಛೇದಿಸಲ್ಪಟ್ಟ ದರ್ಪಾಃ-ಅಹಂಕಾರವುಳ್ಳ ಕುಧಿಯಾಂ-ಕುತ್ಸಿತವಾದ ಬುದ್ಧಿಯುಳ್ಳಂತಹ ದೇಶನಾಶಃ-ದೇಶತ್ಯಾಗವು ಬತ-ಕಷ್ಟವು ಇತಿ-ಹೀಗೆ ಎಂದು ನಾಶಂ-ಮರಣವನ್ನು ವಾಶಾಂತಃ-ಊಳಿಡುತ್ತ ದಶ-ಹತ್ತು ಆಶಾಃ-ದಿಕ್ಕುಗಳನ್ನು ಕುರಿತು ಅಶ್ಲೀಲಾಶೀಲಾಃ-ಅಶ್ಲೀಲ-ಅಮಂಗಳವಾದ ಶೀಲಾಃ-ಸ್ವಭಾವುಳ್ಳ ವಿತಥ-ವ್ಯರ್ಥವಾಗಲ್ಪಟ್ಟ ಶಪಥ-ಪ್ರತಿಜ್ಞೆ ಶಾಪ-ಶಾಪಗಳು ಆಶಿವಾಃ- ಅಮಂಗಳವಾದ ಶಾಂತ-ಶಾಂತವಾಗಲ್ಪಟ್ಟ ಶೌರ್ಯಾಃ-ಪರಾಕ್ರಮವುಳ್ಳವರಾಗಿ ದದೃಶಿರೇ-ಕಾಣಿಸಿ-ಕೊಳ್ಳಲ್ಪಟ್ಟರು.

**ಭಾವಾರ್ಥ**-ಹೇ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರೇ ನಿಮ್ಮ ಪ್ರವಚನ-ವೆಂಬ ಸಿಂಹಘರ್ಜನೆಯನ್ನು ಕೇಳಿದ ಕೂಡಲೇ ಆ ಮಾಯಾವಾದಿಗಳೆಂಬ ನರಿಗಳು ನಿರಾಶೆಯಿಂದ ಕಿರಿಚಿಕೊಂಡವು. ಭಯ ಹೆಚ್ಚಿ ಬುದ್ಧಿಕಳೆದುಕೊಂಡವು. ಗರ್ವವೆಲ್ಲ ಭಂಗವಾಯಿತು. ಅಯ್ಯೋ ದುರ್ಬುದ್ಧಿಗಳು ದೇಶವನ್ನೆಲ್ಲ ಹಾಳುಮಾಡುತ್ತಿದ್ದಾರೆ ಎಂದು ಕೂಗುತ್ತಾ ನಡತೆಗೆಟ್ಟು ನಿರ್ಬಲರಾಗಿ ವ್ಯರ್ಥ ಪ್ರತಿಜ್ಞೆಗೈದು ಶಾಪಹಾಕುತ್ತಾ ಹತ್ತೂ ದಿಕ್ಕುಗಳಲ್ಲಿ ಕಾಣಿಸಿಕೊಂಡರು.

ತ್ರಿಷ್ವಪ್ಯೇವಾವತಾರೇಷ್ವರಿಭಿರಪಘೃಣಂ ಹಿಂಸಿತೋ ನಿರ್ವಿಕಾರಃ
ಸರ್ವಜ್ಞಃ ಸರ್ವಶಕ್ತಿಃ ಸಕಲಗುಣಗಣಾಪೂರ್ಣರೂಪಪ್ರಗಲ್ಭಃ ।
ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ ದೇವ ಕಿಂ ಚಿತ್ರಮತ್ರ
ತ್ರಾತಾ ಯಸ್ಯ ತ್ರಿಧಾಮಾ ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ ॥32॥

ಹೇ ದೇವ-ಎಲೈ ವಾಯುದೇವರೇ ತ್ರಿಷು-ಮೂರು ಅವತಾರೇಷು ಅಪಿ-ಅವತಾರ-

ಗಳಲ್ಲಿಯೂ ಅರಿಭಿಃ-ಶತ್ರುಗಳಿಂದ ಅಪಘೃಣಂ-ಹೋಗಲ್ಪಟ್ಟ ದಯೆವುಳ್ಳ ಹಿಂಸಿತಃ ಅಪಿ-ಹಿಂಸಿಸಲ್ಪಟ್ಟಾಗಲೂ ನಿರ್ವಿಕಾರಃ- ಹೋಗಲ್ಪಟ್ಟ ವಿಕಾರರಹಿತರಾದವರು ಸರ್ವಜ್ಞಃ- ಸರ್ವಜ್ಞರು ಸರ್ವಶಕ್ತಿಃ- ಸರ್ವಕಾರ್ಯಗಳಲ್ಲಿ ಶಕ್ತಿವುಳ್ಳವುಳ್ಳವರು ಸಕಲಗುಣ-ಗಣಾಪೂರ್ಣರೂಪಪ್ರಗಲ್ಭಃ-ಸಕಲ ಸಮಸ್ತವಾದ ಗುಣ-ಗುಣಗಳ ಗಣ-ಸಮೂಹದಿಂದ ಆಪೂರ್ಣ-ಚೆನ್ನಾಗಿ ತುಂಬಲ್ಪಟ್ಟ ರೂಪ-ರೂಪಗಳಿಂದ ಪ್ರಗಲ್ಭಃ-ಪ್ರೌಢವಾದ ಸ್ವಚ್ಛಃ-ನಿರ್ಮಲರು ಸ್ವಚ್ಛಂದಮೃತ್ಯುಃ-ಸ್ವೇಚ್ಛಾನುಸಾರಮರಣವುಳ್ಳವರಾದ ತ್ವಂ-ನೀವು ಸುಜನಂ-ಸಜ್ಜನರನ್ನು ಸುಖಯಸಿ-ಸುಖಪಡಿಸಿದಿರಿ. ಅತ್ರ-ಸಜ್ಜನರ ಸುಖಪಡಿಸುವ ವಿಷಯದಲ್ಲಿ ಕಿಂ ಚಿತ್ರಂ-ಇದೇನಾಶ್ಚರ್ಯ? ಯಸ್ಯ-ಯಾವ ನಿಮಗೆ ತ್ರಿಧಾಮಾ-ಮೂರಾದ ಶ್ವೇತದ್ವೀಪ-ಅನಂತಾಸನ-ವೈಕುಂಠವೇ ಧಾಮಾ-ಮನೆಯಾಗಿವುಳ್ಳ ನಾರಾಯಣನು ತ್ರಾತಾ-ರಕ್ಷಕನು ಉತ-ತರುವಾಯದಲ್ಲಿ ಜಗತ್-ಈ ಜಗತ್ತು ವಶಗಂ-ವಶದಲ್ಲಿ ಇದ್ದಂತಹದ್ದು. ಶಂಕರಾದ್ಯಾಃ-ರುದ್ರದೇವರೇ ಮೊದಲಾಗಿವುಳ್ಳಂತಹ ದೇವತೆಗಳು ಕಿಂಕರಾಃ-ಭೃತ್ಯರು.

**ಭಾವಾರ್ಥ**-ಹೇ ಮುಖ್ಯಪ್ರಾಣದೇವರೇ ಮೂರು ಅವತಾರಗಳಲ್ಲಿಯೂ ಶತ್ರುಗಳು ಸಹನೆಯಿಲ್ಲದೆ ಕೆಣಕಿದರೂ ನಿಮಗೆ ವಿಕಾರವೇ ಆಗಲಿಲ್ಲ. ನೀವು ಸರ್ವಜ್ಞರು. ಸರ್ವಶಕ್ತಿ ಸಂಪನ್ನರು. ಸಕಲಗುಣಗಳ ಸಮೂಹದಿಂದ ತುಂಬಿದ ರೂಪವುಳ್ಳವರು. ಪ್ರಬುದ್ಧರು, ಪಾಪಾದಿಗಳ ಲೇಪವಿಲ್ಲದವರು. ಬಯಸಿದಾಗ ದೇಹ ತೊರೆದು ತೆರಳುವವರು. ಇಂಥ ನೀವು ಸುಜನರಿಗೆ ಸುಖನೀಡುವದರಲ್ಲಿ ಏನು ಆಶ್ಚರ್ಯ ? ಏಕೆಂದರೆ ನಿಮಗೆ ಮೂರು ಲೋಕವನ್ನೇ ಮನೆಮಾಡಿಕೊಂಡ ಶ್ರೀಮನ್ನಾರಾಯಣನು ರಕ್ಷಕನು. ಜಗತ್ತೆಲ್ಲ ನಿಮ್ಮ ಅಧೀನ. ರುದ್ರಾದಿಗಳೆಲ್ಲ ನಿಮ್ಮ ಸೇವಕರು ಹೀಗಿರುವಾಗ ನಿಮಗೆ ಅಸಾಧ್ಯವಾದದ್ದು ಯಾವುದು ಇರಲು ಸಾಧ್ಯ? ಯಾವುದೂ ಇಲ್ಲ.

ಉದ್ಯನ್ಮಂದಸ್ಮಿತಶ್ರೀಮೃದುಮಧುಮಧುರಾಲಾಪಪೀಯೂಷಧಾರಾ-
ಪೂರಾಸೇಕೋಪಶಾಂತಾಸುಖಸುಜನಮನೋಲೋಚನಾಪೀಯಮಾನಮ್ ।
ಸಂದ್ರಕ್ಷ್ಯೇ ಸುಂದರಂ ಸಂದುಹದಿಹ ಮಹದಾನಂದಮಾನಂದತೀರ್ಥ
ಶ್ರೀಮದ್ವಕ್ತ್ರೇಂದುಬಿಂಬಂ ದುರಿತನುದುದಿತಂ ನಿತ್ಯದಾಹಂ ಕದಾ ನು ॥ 33 ॥

ಹೇ ನಿತ್ಯದ-ವೃದ್ಧಿಕ್ಷಯರಹಿತನಾದ ನಿತ್ಯನಾದ ಪರಮಾತ್ಮನನ್ನು ಕೊಡುವಂತಹ ಶ್ರೀಮದಾನಂದತೀರ್ಥ-ಶ್ರೀಮದಾನಂದತೀರ್ಥರೇ ತವ-ನಿಮ್ಮ ಉದ್ಯನ್ಮಂದಸ್ಮಿತ ಶ್ರೀಮೃದುಮಧುಮಧುರಾಲಾಪಪೀಯುಷಧಾರಾಪೂರಾಸೇಕೋಪಶಾಂತಾಸುಖ ಸುಜನಮನೋಲೋಚನಾಪೀಯಮಾನಮ್-ಉದ್ಯತ್-ಅಭಿವ್ಯಕ್ತವಾದ ಮಂದಸ್ಮಿತ -ಮುಗುಳು ನಗೆಯ ಶ್ರೀ ಕಾಂತಿಯಿಂದ ಮೃದು-ಕೋಮಲವಾದ ಮಧು-ಜೇನುತುಪ್ಪದಂತೆ ಮಧುರ-ಸ್ವಾದುಗಳಾದ ಆಲಾಪ-ಮಾತುಗಳೆಂಬ ಪೀಯೂಷ

–ಅಮೃತಗಳ ಧಾರಾ–ಧಾರೆಗಳು ಪೂರ–ಪ್ರವಾಹದಿಂದ ಆಸೇಕ–ತಳ್ಳಿದ್ದರಿಂದ ಉಪಶಾಂತಾ–ನಷ್ಟವಾದಂತಹ ಅಸುಖ–ದುಃಖಗಳೇ ಉಳ್ಳ ಸುಜನ–ಸಜ್ಜನರ ಮನ–ಮನಸ್ಸಿನಿಂದಲೂ ಲೋಚನ–ಕಣ್ಣುಗಳಿಂದ ಆಪೀಯಮಾನಂ–ಚೆನ್ನಾಗಿ ಪಾನಮಾಡಲ್ಪಟ್ಟ ಸುಂದರಂ–ಮನೋಹರವಾದ ಇಹ–ಸೇವಕ ಜನರಲ್ಲಿ ದುರಿತನುತ್–ದುರಿತವನ್ನು ಪರಿಹರಿಸುವ ಮಹದಾನಂದಂ–ಮಹತ್ ದೊಡ್ಡದಾದ ಆನಂದಂ–ಸುಖವನ್ನು ಸಂದುಹತ್–ಸುರಿಸುವ ಉದಿತಂ–ಉದಯಿಸುವ ಶ್ರೀಮದ್ವಕ್ತ್ರೇಂದುಬಿಂಬಂ–ಶ್ರೀ–ಸಂಪತ್ತುಳ್ಳಂತಹ ವಕ್ತ್ರಮ್–ಮುಖವೆಂಬ ಇಂದು–ಚಂದ್ರನ ಬಿಂಬಂ–ಮಂಡಲವನ್ನು ಅಹಂ–ನಾನು ಕದಾನು–ಯಾವಾಗ ದ್ರಕ್ಷ್ಯೇ–ನೋಡೇನು ?

**ಭಾವಾರ್ಥ**– ಹೇ ಶ್ರೀಮದಾನಂದತೀರ್ಥರೇ ಪಾಪಪರಿಹರಿಸುವ ಪ್ರಸನ್ನವಾದ ಹಾಗೂ ಕಾಂತಿಭರಿತವಾದ ನಿಮ್ಮ ಮುಖಚಂದಿರನ ಮಂಡಲವನ್ನು ಯಾವಾಗ ನೋಡುವೆ. ಚಿಮ್ಮುವ ಮಂದಹಾಸದ ಶೋಭೆಯಿಂದ ಶೋಭಿಸುವ ಕೋಮಲವಾದ ಆ ಸುಂದರ ಮುಖಮಂಡಲವು ಜೇನುತುಪ್ಪದಂತೆ ಸವಿಯಾದ ಮಾತುಗಳ ಅಮೃತಧಾರೆಯನ್ನು ಸುರಿಸುತ್ತದೆ. ಸುಜನರ ದುಃಖಗಳನ್ನೆಲ್ಲ ಕಳೆಯುತ್ತದೆ. ಮನಸ್ಸು ಮತ್ತು ಕಣ್ಣುಗಳಿಂದ ಪಾನಮಾಡುವಂತೆ ನೋಡುವ ಸುಜನರಿಗೆ ಅಪಾರ ಆನಂದವನ್ನು ಧಾರೆಯೆರೆಯುತ್ತದೆ.

ಪ್ರಾಚೀನಾಚೀರ್ಣಪುಣ್ಯೋಚ್ಚಯಚತುರತರಾಚಾರತಶ್ಚಾರುಚಿತ್ತಾ–
ನತ್ಯುಚ್ಚಾಂ ರೋಚಯಂತೀಂ ಶ್ರುತಿಚಿತವಚನಾಂಛ್ರಾವಕಾಂಶ್ಚೋದ್ಯಚುಂಚೂನ್ ।
ವ್ಯಾಖ್ಯಾಮುತ್ಖಾತದುಃಖಾಂ ಚಿರಮುಚಿತಮಹಾಚಾರ್ಯ ಚಿಂತಾರತಾಂಸ್ತೇ
ಚಿತ್ರಾಂ ಸಚ್ಛಾಸ್ತ್ರಕರ್ತಶ್ಚರಣಪರಿಚರಾನ್ ಶ್ರಾವಯಾಸ್ಮಾಂಶ್ಚ ಕಿಂಚಿತ್ ॥ 34 ॥

ಹೇ ಸಚ್ಛಾಸ್ತ್ರಕರ್ತೃ–ಸಮೀಚೀನವಾದ ಶಾಸ್ತ್ರಗಳನ್ನು ಮಾಡಿದ ಉಚಿತಮಹಾಚಾರ್ಯ –ಯೋಗ್ಯರೂ ಪೂಜ್ಯರೂ ಉಪದೇಶಕರೂ ಆದ ಆಚಾರ್ಯರೆನಿಸಿದ ಆನಂದ–ತೀರ್ಥರೇ ಪ್ರಾಚೀನಾಚೀರ್ಣಪುಣ್ಯೋಚ್ಚಯ–ಚತುರತರಾಚಾರತಃ–ಪ್ರಾಚೀನ –ಪೂರ್ವಜನ್ಮಗಳಲ್ಲಿ ಆಚೀರ್ಣ–ಮಾಡಲ್ಪಟ್ಟ ಪುಣ್ಯ–ಪುಣ್ಯಗಳ ಉಚ್ಚಯ–ಸಮೂಹದಿಂದ ಚತುರತರ–ಅತ್ಯಂತ ಕುಶಲವಾದ ಚಾರತಃ–ಮನೋಹರವಾದ ಚಾರು–ನಿರ್ದುಷ್ಟವಾದ ಚಿತ್ತಾನ್–ಅಂತಃಕರಣವುಳ್ಳ ಚೋದ್ಯಚುಂಚೂನ್–ಪ್ರಸಿದ್ಧರಾದಂತಹ ಶ್ರಾವಕಾನ್–ಕೇಳುವವರನ್ನು ಕುರಿತು ಚಿರಂ–ಬಹುಕಾಲವು ಅತ್ಯುಚ್ಚಾಂ–ಅತ್ಯಂತ ಉತ್ಕೃಷ್ಟವಾದ ಉತ್ಖಾತದುಃಖಾಂ ಉತ್ಖಾತ–ಕಿತ್ತಲ್ಪಟ್ಟಂತಹ ದುಃಖಾಂ–ದುಃಖವುಳ್ಳ ಚಿತ್ರಾಂ–ವಿಚಿತ್ರವಾದಂತಹ ವ್ಯಾಖ್ಯಾಂ–ವ್ಯಾಖ್ಯಾನವನ್ನು ತೇ–ನಿನ್ನ ಚಿಂತಾರತಾನ್–ಧ್ಯಾನದಲ್ಲಿ ಆಸಕ್ತರಾದಂತಹ ಚರಣಪರಿಚರಾನ್–ಚರಣ–ಪಾದಗಳನ್ನು ಪರಿಚರಾನ್–ಸೇವೆಮಾಡುವಂತಹ ಅಸ್ಮಾನ್–ನಮ್ಮನ್ನು(ನಮಗೆ) ಕಿಂಚಿತ್–ಸ್ವಲ್ಪ ಶ್ರಾವಯ–ಕೇಳಿಸಿರಿ.

**ಭಾವಾರ್ಥ**– ಸಚ್ಛಾಸ್ತ್ರಗಳನ್ನು ರಚಿಸಿದ ಯೋಗ್ಯರೂ ಪೂಜ್ಯರೂಉಪದೇಶಕರೂ ಆದ

ಶ್ರೀಮದಾನಂದತೀರ್ಥರೇ ಎಂದೋ ಹಿಂದೆ ಸಂಪಾದಿಸಿದ ಪುಣ್ಯರಾಶಿಯಿಂದ ಇಂದು ನಾವು ಸದಾಚಾರಸಂಪನ್ನರಾಗಿದ್ದೇವೆ. ಅಂತೆಯೇ ನಿರ್ಮಲ ಮನಸ್ಸುಳ್ಳವರಾಗಿದ್ದೇವೆ. ಈಗ ನಿಮ್ಮನ್ನೇ ನೆನೆಯುತ್ತ ನಿಮ್ಮ ಪಾದಸೇವೆಗೆ ಮೀಸಲಾಗಿದ್ದೇವೆ. ಶ್ರೋತೃಗಳಾದ ಪ್ರಸಿದ್ಧ ಪ್ರಾಶ್ನಿಕರನ್ನು ತೃಪ್ತಿಪಡಿಸುವ ವೀರವಾಕ್ಯಗಳನ್ನು ಆಧರಿಸಿರುವ ಅತ್ಯುತ್ತಮವೂ ದುಃಖಪರಿಹಾರಕವೂ ಆದ ನಿಮ್ಮ ಅದ್ಭುತ ಪಾಠಪ್ರವಚನವನ್ನು ಸ್ವಲ್ಪವಾದರೂ ಕೇಳುವಂತೆ ಅನುಗ್ರಹಿಸಿರಿ.

ಪೀಠೇ ರತ್ನೋಪಕ್ಲೃಪ್ತೇ ರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಂ
ಬ್ರಹ್ಮಾಣಂ ಭಾವಿನಂ ತ್ವಾಂ ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ ।
ಸೇವಂತೇ ಮೂರ್ತಿಮತ್ಯಃ ಸುಚರಿತ ಚರಿತಂ ಭಾತಿ ಗಂಧರ್ವಗೀತಂ
ಪ್ರತ್ಯೇಕಂ ದೇವಸಂಸತ್ಸ್ವಪಿ ತವ ಭಗವನ್ ನರ್ತಿತದ್ಯೋವಧೂಷು ॥ 35 ॥

ಹೇ ಸುಚರಿತ-ಶೋಭನವಾದ ಚರಿತ್ರೆವುಳ್ಳ ಆನಂದತೀರ್ಥರೇ ನಿಜಪದೇ-ನಿಜ-ತನ್ನ ಸಂಬಂಧಿಯಾದ ಪದೇ-ಸ್ಥಾನದಲ್ಲಿ ರುಚಿರರುಚಿಮಣಿಜ್ಯೋತಿಷಾ-ರುಚಿರ -ಮನೋಹರವಾದ, ರುಚಿ-ಕಾಂತಿವುಳ್ಳ ಮಣಿ-ರತ್ನಗಳ, ಜ್ಯೋತಿಷಾ- ಕಾಂತಿಯಿಂದ ಜ್ವಲತಿ-ಪ್ರಕಾಶಿಸುವ ರತ್ನ-ರತ್ನಗಳಿಂದ ಉಪಕ್ಲೃಪ್ತೇ-ಮಾಡಲ್ಪಟ್ಟ ಪೀಠೇ-ಸಿಂಹಾಸನದಲ್ಲಿ ಸನ್ನಿಷಣ್ಣಂ-ಚೆನ್ನಾಗಿ ಕುಳಿತುಕೊಂಡ ಭಾವಿನಂ-ಮುಂದೆ ಬ್ರಹ್ಮಾಣಂ-ಚತುರ್ಮುಖ ಬ್ರಹ್ಮರಾಗುವ ತ್ವಾಂ-ನಿಮ್ಮನ್ನು ವೈದಿಕಾದ್ಯಾಃ-ವೇದಗಳೇ ಮೊದಲಾದ ವಿದ್ಯಾಃ-ವಿದ್ಯೆಗಳು (ವಿದ್ಯಾಭಿಮಾನಿದೇವತೆಗಳು) ಮೂರ್ತಿಮತ್ಯಃ-ಮೂರ್ತಿಮತ್ತಾಗಿ ಸೇವಂತೇ-ಸೇವಿಸುತ್ತಾರೆ. ಹೇ ಭಗವನ್-ಎಲೈ ಆನಂದತೀರ್ಥರೇ ನರ್ತಿತದ್ಯೋವಧೂಷು-ನರ್ತಿತಃ-ಕುಣಿದಾಡಲ್ಪಟ್ಟ ದ್ಯೋ-ಸ್ವರ್ಗದ ವಧೂಷು-ಸ್ತ್ರೀಯರುಳ್ಳ (ಸ್ವರ್ಗದ ಅಪ್ಸರೆಯರು ನರ್ತನ ಮಾಡುವ) ದೇವಸಂಸತ್ಸು-ದೇವಸಭೆಗಳಲ್ಲಿ ಪ್ರತ್ಯೇಕಮ್-ಪ್ರತ್ಯೇಕವಾಗಿ ಗಂಧರ್ವಗೀತಂ-ಗಂಧರ್ವರಿಂದ ಹಾಡಲ್ಪಡುವ ತವ-ನಿಮ್ಮ ಚರಿತಂ-ಚರಿತ್ರೆಯು ಭಾತಿ-ಶೋಭಿಸುತ್ತಿರುವುದು.

**ಭಾವಾರ್ಥ**-ಹೇ ಸಚ್ಚಾರಿತ್ರ್ಯಸಂಪನ್ನರೇ ಮನ ಸೆಳೆಯುವ ಕಿರಣಗಳ ಸೂಸುವ ಮುತ್ತು ಮಾಣಿಕ್ಯಗಳ ಕಾಂತಿಯಿಂದ ಝಗಝಗಿಸುವ ರತ್ನಖಚಿತವಾದ ಪೀಠದಲ್ಲಿ ಆಸೀನ-ರಾಗಿರುವ ಭಾವಿಬ್ರಹ್ಮರಾದ ನಿಮ್ಮನ್ನು ಎಲ್ಲ ವೇದವಿದ್ಯೆಗಳು ಮೂರ್ತಿಮಂತವಾಗಿ ಬಂದು ಸೇವಿಸುತ್ತಿವೆ. ಇದಲ್ಲದೆ ಸ್ವರ್ಗದ ತರುಣಿಯರು ಕುಣಿದಾಡುವ ಪ್ರತಿಯೊಂದು ದೇವ ಸಭೆಗಳಲ್ಲಿ ನಿಮ್ಮ ಚರಿತ್ರೆಯು ಗಂಧರ್ವರಿಂದ ಗಾಯನಗೊಳ್ಳುತ್ತಾ ಶೋಭಾಯ-ಮಾನವಾಗಿದೆ.

ಸಾನುಕ್ರೋಶೈರಜಸ್ರಂ ಜನಿಮೃತಿನಿರಯಾದ್ಯೂರ್ಮಿಮಾಲಾವಿಲೇऽಸ್ಮಿನ್
ಸಂಸಾರಾಬ್ಧೌ ನಿಮಗ್ನಾನ್ ಶರಣಮಶರಣಾನಿಚ್ಛತೋ ವೀಕ್ಷ್ಯ ಜಂತೂನ್ ।

ಯುಷ್ಮಾಭಿಃ ಪ್ರಾರ್ಥಿತಃ ಸನ್ ಜಲನಿಧಿಶಯನಃ ಸತ್ಯವತ್ಯಾಂ ಮಹರ್ಷೇ-
ವ್ಯಕ್ತಶ್ಚಿನ್ಮಾತ್ರಮೂರ್ತಿರ್ನ ಖಲು ಭಗವತಃ ಪ್ರಾಕೃತೋ ಜಾತು ದೇಹಃ ॥ 36 ॥

ಜನಿಮೃತಿನಿರಯಾದ್ಯೂರ್ಮಿಮಾಲಾವಿಲೇ-ಜನಿ-ಉತ್ಪತ್ತಿ, ಮೃತಿ-ಮರಣ, ನಿರಯಾದಿ-ನರಕವೇ ಮೊದಲಾಗಿವುಳ್ಳ ಊರ್ಮಿ-ತೆರೆಗಳ ಮಾಲಾ-ಪಂಕ್ತಿಗಳಿಂದ ಆವಿಲೇ-ಕದಡಲ್ಪಟ್ಟ ಅಸ್ಮಿನ್-ಪ್ರತ್ಯಕ್ಷಸಿದ್ಧವಾದ ಸಂಸಾರಾಬ್ಧೌ-ಸಂಸಾರಸಾಗರದಲ್ಲಿ ಅಜಸ್ರಂ-ನಿರಂತರವಾಗಿ ನಿಮಗ್ನಾನ್-ಮುಳುಗಿದ ಅಶರಣಾನ್-ರಕ್ಷಕರಹಿತರಾದ ಜಂತೂನ್-ಪ್ರಾಣಿಗಳನ್ನು ವೀಕ್ಷ್ಯ-ನೋಡಿ ಸಾನುಕ್ರೋಶೈಃ-ದಯದಿಂದ ಸಹಿತರಾದ ಯುಷ್ಮಾಭಿಃ-ನಿಮ್ಮಿಂದ ಪ್ರಾರ್ಥಿತಃ-ಪ್ರಾರ್ಥಿಸಲ್ಪಟ್ಟ ಜಲನಿಧಿಶಯನಃ-ಜಲನಿಧಿ-ಸಮುದ್ರದಲ್ಲಿ ಶಯನ-ಮಲಗಿದ ನಾರಾಯಣನು ಸತ್ಯವತ್ಯಾಂ-ಸತ್ಯವತೀದೇವಿಯಲ್ಲಿ ಮಹರ್ಷೇಃ-ಪರಾಶರಋಷಿಯ ಶರಣಂ-ರಕ್ಷಣೆಯನ್ನು ಇಚ್ಛತಃ-ಇಚ್ಛಿಸುವ ಚಿನ್ಮಾತ್ರಮೂರ್ತಿಃ-ಚಿನ್ಮಾತ್ರ-ಸೂಕ್ಷ್ಮಜ್ಞಾನವೇ ಮೂರ್ತಿಃ-ಶರೀರವಾಗಿವುಳ್ಳ ವೇದವ್ಯಾಸದೇವರು ವ್ಯಕ್ತಃ-ಪ್ರಕಟರಾದರು ಭಗವತಃ-ಷಡ್ಗುಣೈಶ್ವರ್ಯಸಂಪನ್ನರಾದ ವೇದವ್ಯಾಸದೇವರಿಗೆ ಜಾತು-ಒಮ್ಮೆಯೂ ಪ್ರಾಕೃತಃ-ಪ್ರಕೃತಿಸಂಬಂಧಿಯಾದ ದೇಹಃ-ದೇಹವು ನ-ಇಲ್ಲವಷ್ಟೇ ಖಲು-ಪ್ರಸಿದ್ಧಿಯು.

**ಭಾವಾರ್ಥ**-ಜನನ ಮರಣ ನರಕಾದಿಗಳ ಸಾಲುಸಾಲು ಅಲೆಗಳಿಂದ ಈ ಸಂಸಾರಸಾಗರದಲ್ಲಿ ನಿರಂತರ ಮುಳಗುತ್ತ ಅನಾಥರಾಗಿ ಶರಣಾಗತರಾದ ಜೀವರಾಶಿಗಳನ್ನು ನೋಡಿ ನೀವೆಲ್ಲರೂ ಆ ಸಮುದ್ರಶಾಯಿ ಶ್ರೀಹರಿಯನ್ನು ಪ್ರಾರ್ಥಿಸಿದಿರಿ. ಆಗ ಪರಾಶರ-ಮಹರ್ಷಿಗಳಿಂದ ಸತ್ಯವತೀದೇವಿಯಲ್ಲಿ ಆ ಪರಮಾತ್ಮನು ಕೇವಲ ಜ್ಞಾನಸ್ವರೂಪನಾಗಿ ಪ್ರಕಟನಾದನು. ಅಂತಹ ಭಗವಂತನಿಗೆ ಪ್ರಾಕೃತ ಶರೀರವಿಲ್ಲವಷ್ಟೇ.

ಅಸ್ತವ್ಯಸ್ತಂ ಸಮಸ್ತಶ್ರುತಿಗತಮಧಮೈ ರತ್ನಪೂಗಂ ಯಥಾಂಧೈ-
ರರ್ಥಂ ಲೋಕೋಪಕೃತ್ಯೈ ಗುಣಗಣನಿಲಯಃ ಸೂತ್ರಯಾಮಾಸ ಕೃತ್ಸ್ನಮ್ ।
ಯೋऽಸೌ ವ್ಯಾಸಾಭಿಧಾನಸ್ತಮಹಮಹರಹರ್ಭಕ್ತಿತಸ್ತತ್ಪ್ರಸಾದಾತ್
ಸದ್ಯೋ ವಿದ್ಯೋಪಲಬ್ಧ್ಯೈ ಗುರುತಮಮಗುರುಂ ದೇವದೇವಂ ನಮಾಮಿ ॥37॥

ಗುಣಗಣನಿಲಯಃ-ಗುಣ-ಗುಣಗಳ, ಗಣ-ಸಮೂಹಕ್ಕೆ, ನಿಲಯಃ- ಆಶ್ರಯರಾದ ವ್ಯಾಸಾಭಿಧಾನಃ-ವೇದವ್ಯಾಸರು ಎಂದು ಹೆಸರುಳ್ಳ ಯೋऽಸೌ-ಯಾವ ಪರಮಾತ್ಮನು ಅಂಧೈಃ-ಕುರುಡರಿಂದ ರತ್ನಪೂಗಂ-ರತ್ನಸಮುದಾಯವನ್ನು ಯಥಾ-ಹೇಗೋ ತಥಾ-ಹಾಗೆ ಅಧಮೈಃ-ಅಜ್ಞಾನಿಗಳಿಂದ ಅಸ್ತವ್ಯಸ್ತಂ-ವ್ಯತ್ಯಾಸವಾಗಿ ಮಾಡಲ್ಪಟ್ಟ ಸಮಸ್ತಶ್ರುತಿಗತಮಧಮೈಃ-ಸಮಸ್ತ- ಸಮಸ್ತವಾದ ಶ್ರುತಿ-ವೇದಗಳಲ್ಲಿ ಗತ-ಇದ್ದ ಕೃತ್ಸ್ನಂ-ಸಮಸ್ತ ಅರ್ಥ-ಅರ್ಥವನ್ನು ಲೋಕೋಪಕೃತ್ಯೈ-ಲೋಕ-ಜನರ ಉಪಕೃತ್ಯೈ-ಉಪಕಾರಕ್ಕಾಗಿ ಸೂತ್ರಯಾಮಾಸ-ಪೋಣಿಸಿದರು. ಅಹಂ-ನಾನು ತತ್ಪ್ರಸಾದಾತ್-ತತ್-

ಆ ವೇದವ್ಯಾಸರ ಪ್ರಸಾದಾತ್-ಅನುಗ್ರಹದಿಂದ ಸದ್ಯಃ-ಆ ಕ್ಷಣದಲ್ಲಿ ವಿದ್ಯೋಪಲಬ್ಧ್ಯೈ -ವಿದ್ಯಾ-ಜ್ಞಾನದ ಉಪಲಬ್ಧ್ಯೈ-ಪ್ರಾಪ್ತಿಗೋಸ್ಕರ ಗುರುತಮಂ-ಅತ್ಯಂತಶ್ರೇಷ್ಠನಾದ ಅಗುರುಂ-ಗುರುರಹಿತರಾದ ದೇವದೇವಂ-ದೇವತೆಗಳಿಗೆ ದೇವತೆಯಾದ ತಂ-ಆ ವೇದವ್ಯಾಸದೇವರನ್ನು ಭಕ್ತಿತಃ-ಭಕ್ತಿಯಿಂದ ಅಹರಹಃ-ಪ್ರತಿದಿವಸದಲ್ಲಿ ನಮಾಮಿ-ನಮಸ್ಕರಿಸುತ್ತೇನೆ.

**ಭಾವಾರ್ಥ**-ಗುಣಸಮೂಹಕ್ಕೆ ಆಶ್ರಯನಾದ ಪರಮಾತ್ಮನು ವೇದವ್ಯಾಸ ಎಂಬ ಹೆಸರನ್ನು ಧರಿಸಿದನು. ರತ್ನದ ರಾಶಿಯನ್ನು ಕುರುಡರು ಜೋಡಿಸಿಟ್ಟಂತೆ ವೇದದ ಅರ್ಥವನ್ನು ಹಿಂದು ಮುಂದಾಗಿಸಿ ಹಾಳು ಮಾಡಿದಾಗ (ಅಸ್ತವ್ಯಸ್ತಮಾಡಿದಾಗ) ಲೋಕದ ಉಪಕಾರಕ್ಕಾಗಿ ಅವೆಲ್ಲವನ್ನು ದಾರದಲ್ಲಿ ಪೋಣಿಸುವಂತೆ ಬ್ರಹ್ಮಸೂತ್ರಗಳಿಂದ ಕೂಡಿಸಿದರು. ಇಂಥ ವೇದವ್ಯಾಸದೇವರಿಗೆ ಇನ್ನೊಬ್ಬ ಗುರುವಿಲ್ಲ. ಅವರೇ ಸಕಲ ಹಿರಿಯರಿಗೆ ಗುರುವು. ದೇವತೆಗಳಿಗೆ ದೇವತೋತ್ತಮ. ಅಂತಹ ವೇದವ್ಯಾಸದೇವರ ಅನುಗ್ರಹದಿಂದ ಈ ಕೂಡಲೇ ವಿದ್ಯೆಯನ್ನು ಸಂಪಾದಿಸಲು ಅವರನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

ಆಜ್ಞಾಮನ್ಯೈರಧಾರ್ಯಾಂ ಶಿರಸಿ ಪರಿಸರದ್ರಶ್ಮಿಕೋಟೀರಕೋಟೌ
ಕೃಷ್ಣಸ್ಯಾಕ್ಲಿಷ್ಟಕರ್ಮಾ ದಧದನುಸರಣಾದರ್ಥಿತೋ ದೇವಸಂಘೈಃ ।
ಭೂಮಾವಾಗತ್ಯ ಭೂಮನ್ನಸುಕರಮಕರೋರ್ಬ್ರಹ್ಮಸೂತ್ರಸ್ಯ ಭಾಷ್ಯಂ
ದುರ್ಭಾಷ್ಯಂ ವ್ಯಸ್ಯ ದಸ್ಯೋರ್ಮಣಿಮತ ಉದಿತಂ ವೇದ ಸದ್ಯುಕ್ತಿಭಿಸ್ತ್ವಮ್
॥ 38 ॥

ಹೇ ಭೂಮನ್-ಜ್ಞಾನಾದಿಗುಣಪರಿಪೂರ್ಣರಾದ ವಾಯುದೇವರೇ ಕೃಷ್ಣಸ್ಯ-ವೇದವ್ಯಾಸದೇವರ ಅನ್ಯೈಃ-ಬೇರೆಯವರಿಂದ ಅಧಾರ್ಯಾಂ-ಧರಿಸಲು ಅಸಾಧ್ಯವಾದ ಆಜ್ಞಾಂ-ಆಜ್ಞೆಯನ್ನು ಪರಿಸರದ್ರಶ್ಮಿಕೋಟೀರಕೋಟೌ-ಪರಿಸರದ್ರಶ್ಮಿ-ಪಸರಿಸುವ ಕಿರಣಗಳಿಂದ ಕೂಡಿದ ಕೋಟೀರ-ಕಿರೀಟಗಳ ಕೋಟೌ-ಅಚ್ಚುವುಳ್ಳ ಶಿರಸಿ-ಶಿರಸ್ಸಿನಲ್ಲಿ ದಧತ್-ಧರಿಸಿಕೊಂಡ ಅಕ್ಲಿಷ್ಟಕರ್ಮಾ-ಅಕ್ಲಿಷ್ಟ-ಕ್ಲೇಶರಹಿತವಾದ ಕರ್ಮ-ಕರ್ಮವುಳ್ಳ ತ್ವಂ-ನೀವು ದೇವಸಂಘೈಃ-ದೇವತಾಸಮುದಾಯಗಳಿಂದ ಅನುಸರಣಾತ್-ಒಲೈಕೆಯಿಂದ ಪ್ರಾರ್ಥಿತಃ ಸನ್-ಪ್ರಾರ್ಥಿಸಿ ಕೊಳ್ಳಲ್ಪಟ್ಟವರಾಗಿ ಭೂಮೌ-ಭೂಮಿಯಲ್ಲಿ ಆಗತ್ಯ-ಬಂದು ದಸ್ಯೋಃ-ಕಳ್ಳನಾದ ಮಣಿಮತಃ- ಮಣಿಮಂತನಿಂದ (ಸಂಕರನಿಂದ) ಉದಿತಂ-ಹುಟ್ಟಿದ ದುರ್ಭಾಷ್ಯಂ-ದುಷ್ಟಭಾಷ್ಯವನ್ನು ವೇದಸದ್ಯುಕ್ತಿಭಿಃ-ವೇದ-ವೇದಗಳಿಂದ ಸತ್-ನಿರ್ದುಷ್ಟವಾದ ಯುಕ್ತಿಭಿಃ-ಯುಕ್ತಿಗಳಿಂದ ವ್ಯಸ್ಯ-ನಿರಾಕರಿಸಿ ಅಸುಕರಂ-ಇತರ-ರಿಂದ ರಚಿಸಲಾಗದ ಬ್ರಹ್ಮಸೂತ್ರಸ್ಯ-ಬ್ರಹ್ಮಸೂತ್ರಕ್ಕೆ ಭಾಷ್ಯಂ-ಭಾಷ್ಯವನ್ನು (ವೇದ-ಸದ್ಯುಕ್ತಿಭಿಃ-ವೇದಗಳಿಂದ ಮತ್ತು ಉತ್ತಮ ಯುಕ್ತಿಗಳಿಂದ) ಅಕರೋಃ-ಮಾಡಿದಿರಿ.

**ಭಾವಾರ್ಥ**-ಮಹಾಮಹಿಮರಾದ ಮುಖ್ಯಪ್ರಾಣದೇವರೇ ನಿಮ್ಮನ್ನು ಬಿಟ್ಟು ಬೇರೆಯವರು ಪರಮಾತ್ಮನ ಆಜ್ಞೆಯನ್ನು ಧರಿಸಲು ಸಾಧ್ಯವಿಲ್ಲ. ನಿರ್ಮಲ ನಡತೆಯಿಂದ ಕೂಡಿದ ನೀವು ಕಿರಣಗಳಿಂದ ಹರಡಿರುವ ಕಿರೀಟದ ತುದಿಗಳಿಂದ ಕೂಡಿದ ನಿಮ್ಮ ತಲೆಯ ಮೇಲೆ ಇತರರಿಗೆ ಧರಿಸಲಾಗದ ಶ್ರೀವೇದವ್ಯಾಸದೇವರ ಅಪ್ಪಣೆಯನ್ನು ಧರಿಸಿದಿರಿ. ದೇವತೆಗಳ ಭಕ್ತಿಪೂರ್ವಕ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಿದಿರಿ. ಪೂಜ್ಯರೇ ಮಣಿಮಂತನು ಬರೆದ ದುರ್ಭಾಷ್ಯವನ್ನು ಖಂಡಿಸಿ ಇತರರಿಗೆ ರಚಿಸಲಾಗದಂತಹ ಬ್ರಹ್ಮಸೂತ್ರಗಳ ಭಾಷ್ಯವನ್ನು ವೇದದ ಸದ್ಯುಕ್ತಿಗಳಿಂದ ರಚಿಸಿದಿರಿ.

ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ ರೂಪ್ಯಪೀಠಾಭಿಧಾನೇ
ತತ್ರಾಪಿ ಬ್ರಹ್ಮಜಾತಿಸ್ತ್ರಿಭುವನವಿಶದೇ ಮಧ್ಯಗೇಹಾಖ್ಯಗೇಹೇ ।
ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ
ಕೃತ್ವಾ ಭಾಷ್ಯಾಣಿ ಸಮ್ಯಗ್ ವ್ಯತನುತ ಚ ಭವಾನ್ ಭಾರತಾರ್ಥಪ್ರಕಾಶಮ್ ॥ 39 ॥

ಹೇ ವಾಯೋ-ಎಲೈ ವಾಯುದೇವರೇ ಭವಾನ್-ನೀವು ವಿಶುದ್ಧೇ-ಅತ್ಯಂತ-ನಿರ್ಮಲವಾದ ದ್ವಿಜಗಣನಿಲಯೇ-ದ್ವಿಜ-ಬ್ರಾಹ್ಮಣರ ಗಣ-ಸಮೂಹಕ್ಕೆ ನಿಲಯೇ-ಆಶ್ರಯವಾದ ರೂಪ್ಯಪೀಠಾಭಿಧಾನೇ-ರೂಪ್ಯಪೀಠ-ರೂಪ್ಯಪೀಠವೆಂಬ ಅಭಿಧಾನೇ-ಹೆಸರುಳ್ಳ ತ್ರಿಭುವನವಿಶದೇ-ಮೂರುಲೋಕದಲ್ಲಿ ಪ್ರಸಿದ್ಧವಾದ ಕ್ಷೇತ್ರೇ-ಕ್ಷೇತ್ರದಲ್ಲಿ ತತ್ರಾಪಿ-ಅದರಲ್ಲೂ ಮಧ್ಯಗೇಹಾಖ್ಯಗೇಹೇ-ಮಧ್ಯಗೇಹ ಎಂದು ಹೆಸರುಳ್ಳ ಬ್ರಾಹ್ಮಣನ ಮನೆಯಲ್ಲಿ ಬ್ರಹ್ಮಜಾತಿಃ ಸನ್-ಬ್ರಾಹ್ಮಣಜಾತಿವುಳ್ಳವನಾಗಿ ಭೂತ್ವಾ-ಅವತರಿಸಿ ಪಾರಿವ್ರಾಜ್ಯಾಧಿರಾಜಃ-ಪಾರಿವ್ರಾಜ-ಸನ್ಯಾಸಿಸಾಮ್ರಾಜ್ಯಕ್ಕೆ ಅಧಿರಾಜಃ ಸನ್-ಒಡೆಯನಾಗಿ ಪುನರಪಿ-ಮರಳಿ ಬದರೀಂ-ಬದರಿಕಾಶ್ರಮವನ್ನು ಪ್ರಾಪ್ಯ-ಹೊಂದಿ ಕೃಷ್ಣಂ ಚ-ವೇದವ್ಯಾಸದೇವರನ್ನು ಸಮ್ಯಕ್-ಚೆನ್ನಾಗಿ ನತ್ವಾ-ನಮಸ್ಕರಿಸಿ ಭಾಷ್ಯಾಣಿ-ಭಾಷ್ಯಗಳನ್ನು ಕೃತ್ವಾ-ಮಾಡಿ ಭಾರತಾರ್ಥಪ್ರಕಾಶಂ-ಭಾರತಾರ್ಥಗಳನ್ನು ಪ್ರಕಾಶಿಸುವಂತಹ ತಾತ್ಪರ್ಯನಿರ್ಣಯವನ್ನು ವ್ಯತನುತ-ಮಾಡಿದಿರಿ.

**ಭಾವಾರ್ಥ**- ಹೇ ಮುಖ್ಯಪ್ರಾಣದೇವರೇ ಬ್ರಾಹ್ಮಣಸಮೂಹಕ್ಕೆ ಆಶ್ರಯವಾದ ರೂಪ್ಯಪೀಠವೆಂಬ ಪವಿತ್ರಕ್ಷೇತ್ರದಲ್ಲಿ ಅವತಾರ ಮಾಡಿದಿರಿ. ಅದರಲ್ಲೂ ಮೂರು ಲೋಕ-ದಲ್ಲಿ ಹೆಸರುವಾಸಿಯಾದ ಮಧ್ಯಗೇಹ ಎಂಬ ಮನೆಯಲ್ಲಿ ಬ್ರಾಹ್ಮಣರಾಗಿ ಅವತರಿಸಿದಿರಿ. ಪರಮಹಂಸರಾಗಿ ಮತ್ತೆ ಮತ್ತೆ ಬದರಿಗೆ ಹೋಗಿ ವೇದವ್ಯಾಸದೇವರಿಗೆ ನಮಸ್ಕರಿಸಿ ಅನೇಕ ಭಾಷ್ಯಗಳನ್ನು ರಚಿಸಿದಿರಿ. ಭಾರತದ ಅರ್ಥವನ್ನು ಬೆಳಗಿಸುವ ಗ್ರಂಥವನ್ನೂ ರಚಿಸಿದಿರಿ.

ವಂದೇ ತಂ ತ್ವಾ ಸುಪೂರ್ಣಪ್ರಮತಿಮನುದಿನಾಸೇವಿತಂ ದೇವವೃಂದೈ-
ರ್ವಂದೇ ವಂದಾರುಮೀಶೇ ಶ್ರಿಯ ಉತ ನಿಯತಂ ಶ್ರೀಮದಾನಂದತೀರ್ಥಮ್ ।

ವಂದೇ ಮಂದಾಕಿನೀಸತ್ಸರಿದಮಲಜಲಾಸೇಕಸಾಧಿಕ್ಯಸಂಗಂ
ವಂದೇಽಹಂ ದೇವ ಭಕ್ತ್ಯಾ ಭವಭಯದಹನಂ ಸಜ್ಜನಾನ್ಮೋದಯಂತಮ್ ॥ 40 ॥

ಹೇ ದೇವ-ಎಲೈ ಮುಖ್ಯಪ್ರಾಣನೇ ತಂ-ವೇದಗಳಲ್ಲಿ ಪ್ರಸಿದ್ಧನಾದ ತ್ವಾಂ-ನಿನ್ನನ್ನು ಅಹಂ-ನಾನು ಭಕ್ತ್ಯಾ-ಭಕ್ತಿಯಿಂದ ವಂದೇ-ನಮಸ್ಕರಿಸುತ್ತೇನೆ. ದೇವವೃಂದೈಃ-ದೇವತಾ-ಸಮುದಾಯಗಳಿಂದ ಅನುದಿನಂ-ಪ್ರತಿದಿನವೂ ಸೇವಿತಂ-ಚೆನ್ನಾಗಿ ಸೇವಿಸಲ್ಪಟ್ಟ ಸುಪೂರ್ಣಪ್ರಮತಿಂ-ಸು-ಶೋಭನವಾದ ಪೂರ್ಣ-ತುಂಬಲ್ಪಟ್ಟ ಪ್ರಮತಿ-ಪ್ರಕೃಷ್ಟವಾದ ಜ್ಞಾನವುಳ್ಳ ತ್ವಾಂ-ನಿನ್ನನ್ನು ಅಹಂ-ನಾನು ವಂದೇ-ನಮಸ್ಕರಿಸುತ್ತೇನೆ. ಈಶೇ-ಪರಮಾತ್ಮನಲ್ಲಿ ಶ್ರಿಯಃ-ಲಕ್ಷ್ಮೀದೇವಿಯರಿಗೆ ನಿಯತಂ-ತಪ್ಪದೇ ವಂದಾರುಂ-ನಮಸ್ಕರಿಸುವ ಸ್ವಭಾವವುಳ್ಳ ಶ್ರೀಮದಾನಂದತೀರ್ಥಂ-ಆನಂದತೀರ್ಥನಾಮಕರಾದ ತ್ವಾಂ-ನಿಮ್ಮನ್ನು ಅಹಂ-ನಾನು ವಂದೇ-ನಮಸ್ಕರಿಸುತ್ತೇನೆ. ಮಂದಾಕಿನಿ-ಭಾಗೀರಥೀ ಎಂಬ ಸತ್ಸರಿದಮಲಜಲಾಸೇಕಸಾಧಿಕ್ಯಸಂಗಂ-ಸತ್-ನಿರ್ದುಷ್ಟವಾದ ಸರಿತ್-ಗಂಗಾನದಿಯ ಅಮಲ-ನಿರ್ಮಲ ಜಲ-ನೀರಿನ ಆಸೇಕ-ಸ್ನಾನಕ್ಕಿಂತ ಸಾಧಿಕ್ಯ-ಆಧಿಕ್ಯದಿಂದ ಸಹಿತವಾದ ಸಂಗ-ಸಂಬಂಧವುಳ್ಳ ಭವಭಯದಹನಂ-ಭವ-ಸಂಸಾರದಿಂದ ಬಂದ ಭಯ-ಭಯವನ್ನು ದಹನಂ-ಸುಡುವ, ಸಜ್ಜನಾನ್-ಸಜ್ಜನರಿಗೆ ಮೋದಯಂತಂ-ಸಂತೋಷ-ವನ್ನುಂಟು ಮಾಡುವ ತ್ವಾಂ-ನಿನ್ನನ್ನು ಅಹಂ-ನಾನು ವಂದೇ-ನಮಸ್ಕರಿಸುತ್ತೇನೆ.

**ಭಾವಾರ್ಥ**-ದೇವತೆಗಳ ಸಮೂಹದಿಂದ ಪ್ರತಿದಿನವೂ ಸೇವಿತರಾದ ಪೂರ್ಣಪ್ರಜ್ಞಾ-ಚಾರ್ಯರು ಎಂದು ಪ್ರಸಿದ್ಧರಾದ ನಿಮಗೆ ವಂದಿಸುತ್ತೇನೆ. ಶ್ರೀಹರಿಗೆ ಹಾಗೂ ಲಕ್ಷ್ಮೀ-ದೇವಿಗೆ ತಪ್ಪದೇ ನಮಸ್ಕರಿಸುವ ಆ ಆನಂದತೀರ್ಥರನ್ನು ವಂದಿಸುತ್ತೇನೆ. ಪವಿತ್ರ ಗಂಗಾ-ನದಿಯ ನಿರ್ಮಲ ನೀರಿನಲ್ಲಿ ಸ್ನಾನಮಾಡುವದಕ್ಕಿಂತ ಅಧಿಕವಾದ ಸಂಗ ನೀಡುವ ಆ ಗುರುಗಳಿಗೆ ವಂದಿಸುವೆ. ಹೇ ದೇವ ಸಂಸಾರಭಯವನ್ನು ಪರಿಹರಿಸಿ ಸುಜನರಿಗೆ ಆನಂದ ನೀಡಿದ ನಿಮಗೆ ಭಕ್ತಿಯಿಂದ ನಮಸ್ಕರಿಸುವೆ.

ಸುಬ್ರಹ್ಮಣ್ಯಾಖ್ಯಸೂರೇಃ ಸುತ ಇತಿ ಸುಭೃಶಂ ಕೇಶವಾನಂದತೀರ್ಥ-
ಶ್ರೀಮತ್ಪಾದಾಬ್ಜಭಕ್ತಃ ಸ್ತುತಿಮಕೃತ ಹರೇರ್ವಾಯುದೇವಸ್ಯ ಚಾಸ್ಯ ।
ತತ್ಪಾದಾರ್ಚಾದರೇಣ ಗ್ರಥಿತಪದಲಸನ್ಮಾಲಯಾ ತ್ವೇತಯಾ ಯೇ
ಸಂರಾಧ್ಯಾಮೂ ನಮಂತಿ ಪ್ರತತಮತಿಗುಣಾ ಮುಕ್ತಿಮೇತೇ ವ್ರಜಂತಿ ॥ 41 ॥

॥ ಇತಿ ಶ್ರೀತ್ರಿವಿಕ್ರಮಪಂಡಿತಾಚಾರ್ಯವಿರಚಿತಾ ಶ್ರೀಹರಿವಾಯುಸ್ತುತಿಃ ॥

ಸುಬ್ರಹ್ಮಣ್ಯಾಖ್ಯಸೂರೇಃ-ಸುಬ್ರಹ್ಮಣ್ಯ-ಸುಬ್ರಹ್ಮಣ್ಯ ಎಂಬ ಹೆಸರುಳ್ಳ ಸೂರೇಃ-ವಿದ್ವಾಂಸನ ಸುತ-ಮಗನಾದ ಸುಭೃಶಂ-ಚೆನ್ನಾಗಿ ಕೇಶವಾನಂದತೀರ್ಥ-ಶ್ರೀಮತ್ಪಾದಾಬ್ಜ-ಭಕ್ತಃ-ಕೇಶವ-ನಾರಾಯಣ,ಆನಂದತೀರ್ಥ-ಆನಂದತೀರ್ಥರ ಶ್ರೀಮತ್-ಸಂಪತ್ತುಳ್ಳ ಪಾದಾಬ್ಜ-ಪಾದಕಮಲಗಳಲ್ಲಿ ಭಕ್ತಃ-ಭಕ್ತನಾದ ತ್ರಿವಿಕ್ರಮಪಂಡಿಚಾರ್ಯನು ಹರೇಃ-

ಪರಮಾತ್ಮನ ಅಸ್ಯ-ಪೂರ್ವೋಕ್ತನಾದ ವಾಯುದೇವಸ್ಯ-ವಾಯುದೇವರ ಇತಿ-ಪೂರ್ವೋಕ್ತಪ್ರಕಾರವಾಗಿ ಸ್ತುತಿಂ-ಸ್ತೋತ್ರವನ್ನು ಅಕೃತ-ಮಾಡಿದನು. ಯೇ-ಯಾವ ಜನರು ಏತಯಾ-ನನ್ನಿಂದ ಮಾಡಲ್ಪಟ್ಟ ತತ್ಪಾದಾರ್ಚಾದರೇಣ-ತತ್-ಹರಿವಾಯುಗಳ ಪಾದ-ಪಾದಗಳ ಅರ್ಚ-ಪೂಜೆಮಾಡುವಲ್ಲಿ ಆದರೇಣ-ಭಕ್ತಿಯಿಂದ ಗ್ರಥಿತಪದಲಸತ್-ಪೋಣಿಸಲ್ಪಟ್ಟ ಪದ-ಪದಗಳಿಂದ ಲಸತ್-ಒಪ್ಪುವ ಮಾಲಯಾ-ಮಾಲಿಕೆಯಿಂದ ಅಮುಂ-ಹರಿವಾಯುಗಳನ್ನು ಸಂರಾಧ್ಯ-ಪೂಜೆಮಾಡಿ ನಮಂತಿ-ನಮಸ್ಕಾರ ಮಾಡು-ತ್ತಾರೆ. ತೇ-ಆ ಜನರು ಪ್ರತತಮತಿಗುಣಾಃ ಪ್ರತತ-ಅತ್ಯಂತವಿಸ್ತೃತವಾದ ಮತಿ-ಅಪೇಕ್ಷಿತ-ವಾದ ಜ್ಞಾನವೆಂಬ ಗುಣಾಃ ಸಂತಃ-ಗುಣಗಳುಳ್ಳವರಾಗಿ ಮುಕ್ತಿಂ-ಮೋಕ್ಷವನ್ನು ವ್ರಜಂತಿ-ಹೊಂದುತ್ತಾರೆ.

**ಭಾವಾರ್ಥ-** ಶ್ರೀಮನ್ನಾರಾಯಣನ ಹಾಗೂ ಶ್ರೀಆನಂದತೀರ್ಥರ ಕಾಂತಿಯುಕ್ತವಾದ ಚರಣಕಮಲಗಳ ಭಕ್ತನಾದ ಸುಬ್ರಹ್ಮಣ್ಯ ಎಂಬ ಪಂಡಿತರ ಪುತ್ರನಾದ ತ್ರಿವಿಕ್ರಮಪಂಡಿತನು ನಾರಾಯಣನ ಹಾಗೂ ವಾಯುದೇವರ ಸ್ತೋತ್ರವನ್ನು ಮಾಡಿದ್ದಾನೆ. ಅವರ ಪಾದ-ಪೂಜೆಗಾಗಿ ಬಹಳ ಭಕ್ತಿಯಿಂದ ಸುಂದರ ಶಬ್ದಗಳಿಂದ ಕಟ್ಟಿದ ಈ ಹಾರವನ್ನು ಹಿಡಿದು ಹರಿವಾಯುದೇವತೆಗಳನ್ನು ಸೇವಿಸುವವರು ಜ್ಞಾನಾದಿಗುಣಗಳಿಂದ ಕೂಡಿದವರಾಗಿ ಮೋಕ್ಷವನ್ನು ಹೊಂದುತ್ತಾರೆ.

|| ಇತಿ ಶ್ರೀತ್ರಿವಿಕ್ರಮಪಂಡಿತಾಚಾರ್ಯವಿರಚಿತಾ ಶ್ರೀಹರಿವಾಯುಸ್ತುತಿಃ ||

ಪರಿಶಿಷ್ಟ-೧

## श्रीसत्यप्रमोदतीर्थश्रीपादैः विरचितम्

# श्रीवायुस्तुतिमण्डनम्

(ಶ್ರೀಮತ್ಸತ್ಯಪ್ರಮೋದತೀರ್ಥಶ್ರೀಚರಣವಿರಚಿತ
ಶ್ರೀವಾಯುಸ್ತುತಿಮಂಡನದ ಕನ್ನಡಾನುವಾದ ಸಹಿತ)

ಆತ್ಮೋದ್ಧಾರಕ್ಕೆ ಹರಿ-ಗುರುಗಳ ಅರಿವು ಅತ್ಯವಶ್ಯಕ. ಅದು ಅಷ್ಟು ಸುಲಭದ ಮಾತಲ್ಲ. ಹರಿಯನ್ನು ಅರಿತ ಹಿರಿಯ ಗುರುಗಳೇ ಅವರ ಅರಿವನ್ನು ಮೂಡಿಸಬೇಕು. ಅನ್ನುವದಕ್ಕಾಗಿಯೇ ಪರಮಕರುಣಾಳುಗಳಾದ ತ್ರಿವಿಕ್ರಮಪಂಡಿತರು ವಾಯುಸ್ತುತಿ-ಯನ್ನು ರಚಿಸಿದರು. ಆ ಮೂಲಕ ಹರಿವಾಯುಗುರುಗಳ ಅರಿವನ್ನು ಮೂಡಿಸಿದರು. ತ್ರಿವಿಕ್ರಮಪಂಡಿತಾಚಾರ್ಯರು ರಚಿಸಿದ ವಾಯುಸ್ತುತಿ ಎಂಬ ಮಂತ್ರತುಲ್ಯವಾದ ಶ್ರೇಷ್ಠ ಕೃತಿಯನ್ನು ಸಹಿಸದ ಅಸುರಸ್ವಭಾವದ ಅಹೋಬಲನೆಂಬ ಪಂಡಿತ ಇದಕ್ಕೆ ಖಂಡನಾಭಾಸರೂಪವಾಗಿ ಈಶಾನಸ್ತುತಿ ಎಂಬ ಗ್ರಂಥವನ್ನು ರಚಿಸಿದ್ದು ಸರ್ವವಿದಿತ-ವಾದ ವಿಷಯ. ಆ ಗ್ರಂಥದಲ್ಲಿ ಮಾಡಲಾದ ಹರಿವಾಯುಗುರುಗಳ ನಿಂದನೆಯನ್ನು ಖಂಡನೆ ಮಾಡಿ 'ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ' ಎಂಬ ಆಚಾರ್ಯರ ಆದೇಶದಂತೆ ಮಹಾಸ್ವಾಮಿಗಳು (ಶ್ರೀ ಸತ್ಯಪ್ರಮೋದತೀರ್ಥರು) ವಾಯುಸ್ತುತಿಮಂಡನವನ್ನು ರಚಿಸಲು ಇಚ್ಛಿಸಿದವರಾಗಿ ತಮ್ಮ ಗ್ರಂಥದ ಆದಿಯಲ್ಲಿ ಇಷ್ಟನೂ ವಿಶಿಷ್ಟನೂ ಅಧಿಕೃತನೂ ಆದ ಶ್ರೀಮೂಲರಾಮನ ನಮಸ್ಕಾರರೂಪವಾದ ನಿರ್ವಿಘ್ನ ಪರಿಸಮಾಪ್ತಿ ಹಾಗೂ ಪ್ರಚಯಾದಿ ಪ್ರಯೋಜನ ನೀಡುವ ಮಂಗಲವನ್ನು ನಿಬಂಧನ ಮಾಡುತ್ತಿದ್ದಾರೆ.

राम रामेति रामेति रमे रामे मनोरमे ।
इत्युमायै शङ्करोक्तं मूलरामं सदा भजे ।

ಅಹೋಬಲ ಪಂಡಿತ ತನ್ನ ಈಶಾನಸ್ತುತಿಯ ಆದಿಯಲ್ಲಿ ರುದ್ರದೇವರನ್ನು ಸ್ತುತಿಸಿದ್ದಾನೆ. ಅಲ್ಲಿ ಸ್ತುತ್ಯರಾದ ರುದ್ರದೇವರು ಪಾರ್ವತಿಯನ್ನು ಕುರಿತು 'ಶ್ರೀರಾಮ ರಾಮ ರಾಮೇತಿ' ಎಂಬುದಾಗಿ ರಾಮನಾಮ ಸ್ಮರಣೆ ಮಾಡಬೇಕು. ಆ ರಾಮನಾಮಸ್ಮರಣೆ ಸಹಸ್ರನಾಮಕ್ಕೆ ತುಲ್ಯವಾದದ್ದು ಎಂಬುದಾಗಿ ಹೇಳಿ ಶ್ರೀರಾಮಚಂದ್ರನ ಸರ್ವೋತ್ತಮತ್ವವನ್ನು ಬಣ್ಣಿಸಿದ್ದಾರೆ. ಅಂತಹ ರುದ್ರದೇವರಿಂದ ಸ್ತುತ್ಯನಾದ ಶ್ರೀಮೂಲರಾಮನನ್ನು ನಿರಂತರ ಭಕ್ತಿಯಿಂದ ಭಜಿಸುತ್ತೇವೆ.

प्रणम्य श्रीमदानन्दतीर्थादिगुरुशेखरान् ।
वायुस्तुतिं मण्डयिष्ये पण्डिताचार्यनिर्मिताम् ।
ईशानस्तुतिरित्येवं छद्मनाम्ना परेरितान् ।
दोषाभासांश्चोद्धरिष्ये सप्रमाणं सतां मुदे ।

ಶ್ರೀಮದಾನಂದತೀರ್ಥರೇ ಮೊದಲಾದ ಎಲ್ಲ ಗುರುಶ್ರೇಷ್ಠರನ್ನು ನಮಸ್ಕರಿಸಿ ಪಂಡಿತಾ-ಚಾರ್ಯರು ಬರೆದ ವಾಯುಸ್ತುತಿಯ ಮಂಡನವನ್ನು ಇಲ್ಲಿ ಮಾಡುತ್ತಿದ್ದೇನೆ. ಈಶಾನಸ್ತುತಿಯೆಂಬ ಕೃತಿಯೊಂದು ಪೂರ್ವದಲ್ಲಿ ಅಹೋಬಲಪಂಡಿತನಿಂದ ರಚಿತವಾಗಿದ್ದು ಅಲ್ಲಿ ಕೇವಲ ದೋಷಾಭಾಸಗಳನ್ನು ಹೇಳುವ ದುಸ್ಸಾಹಸ ಮಾಡಲಾಗಿದೆ. ವಾಯುಸ್ತುತಿಯ ಮೇಲೆ ಮಾಡಲಾದ (ಆಕ್ಷೇಪಗಳನ್ನು) ದೋಷಾ-ಭಾಸಗಳನ್ನು ಪರಿಹರಿಸಿ ಸಜ್ಜನರಿಗೆ ಸಂತೋಷ ನೀಡುವುದೇ ಈ ಕೃತಿಯ ಉದ್ದೇಶ-ವಾಗಿದೆ.

तत्रादौ ईशानस्तुतिरिति यदस्याः स्तुतेरभिधानं न तद्युक्तम् । अत्र स्तुतिप्रणेतुरहोबलपण्डितस्य ईशानशब्देन खलु शङ्करः एवाभिप्रेतः । स च विधिहरिपरमत्वेन वन्दितः । तदेतच्छङ्कराचार्यादिस्वपूर्वाचार्याशयविप्रतीपम् । शङ्कराचार्याः खलु विष्णुसहस्रनामसु एतन्नाम व्याकुर्वन्तः विष्णोरेव सर्वोत्तमत्वपरतया तद्बभाषिरे । (सर्वभूतनियन्तृत्वात् ईशानः । विष्णुसहस्रनामशाङ्करभाष्य-२०) 'भूतभव्यभवन्नाथ' इति पदमपि तदर्थतयैव व्याचख्युः । एवं महेज्यः मुकुन्दः इत्यादिपदव्याकृतिष्वपि ब्रह्मरुद्राद्युत्तमत्वं विष्णोः सोपपत्तिकं समर्थयाम्बभूवुः ।

### ಈಶಾನಸ್ತುತಿ ಎಂಬ ನಾಮವೇ ಸಲ್ಲದು

ಅಹೋಬಲಪಂಡಿತನು ತನ್ನ ಗ್ರಂಥಕ್ಕೆ ಈಶಾನಸ್ತುತಿಯೆಂದು ನಾಮಕರಣ ಮಾಡಿದ್ದೇ ಸರಿಯಿಲ್ಲ. ಏಕೆಂದರೆ ಗ್ರಂಥಕಾರರು ಈಶಾನಸ್ತುತಿ ಎಂಬಲ್ಲಿ ಈಶಾನ ಎಂಬ ಶಬ್ದಕ್ಕೆ ರುದ್ರದೇವರು ಎಂದು ಅರ್ಥವನ್ನು ಇಟ್ಟುಕೊಂಡು ಆ ಈಶಾನನಾದರೂ ಬ್ರಹ್ಮದೇವರು ಹಾಗೂ ಶ್ರೀಮನ್ನಾರಾಯಣನಿಗಿಂತಲೂ ಅಧಿಕ ಎಂಬುದಾಗಿ ವರ್ಣಿಸಿದ್ದಾರೆ. ಈ ರೀತಿಯಾಗಿ ಹೇಳುವದು ಶಂಕರಾಚಾರ್ಯರೇ ಮೊದಲಾದ ತಮ್ಮ ಪೂರ್ವಾ-ಚಾರ್ಯರ ಅಭಿಪ್ರಾಯಕ್ಕೆ ವಿರುದ್ಧವಾಗಿದೆ. ಶಂಕರಾಚಾರ್ಯರು ತಮ್ಮ ವಿಷ್ಣುಸಹಸ್ರ-ನಾಮ ಸ್ತೋತ್ರದ ಭಾಷ್ಯದಲ್ಲಿ ಈಶಾನಶಬ್ದವನ್ನು ವಿಷ್ಣುಸರ್ವೋತ್ತಮತ್ವ

ಪರವಾಗಿಯೇ ವ್ಯಾಖ್ಯಾನ ಮಾಡಿದ್ದಾರೆ. ಇದೇ ರೀತಿಯಾಗಿ ಮಹೇಜ್ಯ, ಮುಕುಂದ ಮೊದಲಾದ ಪದಗಳ ವ್ಯಾಖ್ಯಾನದ ಸಂದರ್ಭದಲ್ಲಿಯೂ ಬ್ರಹ್ಮರುದ್ರಾದಿಗಳಿಗಿಂತಲೂ ವಿಷ್ಣು ಉತ್ತಮ ಎಂದು ಉಪಪಾದನೆ ಮಾಡಿದ್ದಾರೆ.

'ब्रह्मेन्द्ररुद्रमरुदर्ककिरीटकोटि ।
सङ्घट्टिताङ्घ्रिकमलामलकान्तिकान्त ।
लक्ष्मीलसत्कुचसरोरुहराजहंस
लक्ष्मीनृसिंह मम देहि करावलम्बम्'

(श्रीशङ्कराचार्यकृतलक्ष्मीनरसिंहकरुणारसस्तोत्रम्) इत्यत्र विष्ण्ववतारं नृसिंहं ब्रह्मरुद्रादिवन्दितत्वेन संवर्ण्य तत्करावलम्बं प्रार्थयामासुः ।

ಶಂಕರಾಚಾರ್ಯರು 'ಶ್ರೀಬ್ರಹ್ಮರುದ್ರಮರುದರ್ಕಕಿರೀಟಕೋಟಿಸಂಘಟ್ಟಿತಾಂಘ್ರಿ ಕಮಲಾಮಲಕಾಂತಿಕಾಂತ........ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್' ಎಂಬುವಲ್ಲಿ ವಿಷ್ಣುವಿನ ಅವತಾರನಾದ ನೃಸಿಂಹನನ್ನು ಬ್ರಹರುದ್ರಾದಿವಂದಿತ ಎಂಬುದಾಗಿ ವರ್ಣಿಸಿ ಅಂತಹ ನರಸಿಂಹದೇವರ ಕರಾವಲಂಬನವನ್ನು ಪ್ರಾರ್ಥಿಸಿದ್ದಾರೆ.

एवं 'कृपापात्रं यस्य त्रिपुररिपुः' इति श्लोके कृष्णादवमत्वेन शङ्करं समवर्णयन् । एवमन्यत्रापि तत्र तत्र विष्णोः शङ्कराद्युत्तमत्वं निरवकाशसुस्पष्टैः प्रकारैः समुदघोषयन् ।

'ಕೃಪಾಪಾತ್ರಂ ಯಸ್ಯ ತ್ರಿಪುರರಿಪುಃ' ಎಂಬ ಶ್ಲೋಕದಲ್ಲಿಯೂ ರುದ್ರದೇವರು ಕೃಷ್ಣನಿಗಿಂತಲೂ ಅವರು ಎಂದು ವರ್ಣಿಸಿದ್ದಾರೆ. ಇದರಂತೆ ಬೇರೆ ಪ್ರಸಂಗಗಳಲ್ಲಿಯೂ ಅಲ್ಲಲ್ಲಿ ವಿಷ್ಣುವಿಗೆ ರುದ್ರಾದ್ಯುತ್ತಮತ್ವವನ್ನು ನಿರವಕಾಶ ಸ್ಪಷ್ಟಪ್ರಕಾರಗಳಿಂದ ಚೆನ್ನಾಗಿ ಪ್ರತಿಪಾದಿಸಿದ್ದಾರೆ.

एवं मधुसूदनसरस्वतीभिः 'कृष्णात्परं किमपि तत्त्वमहं न जाने' इति कृष्णस्यैव परतत्वतावर्णनद्वारेण शङ्करस्यापरतत्वता न्यरूपि ।

ಇದೇ ರೀತಿಯಾಗಿ ಮಧುಸೂದನ ಸರಸ್ವತಿಗಳು 'ಕೃಷ್ಣಾತ್ಪರಂ ಕಿಮಪಿ ತತ್ತ್ವಮಹಂ ನ ಜಾನೇ' ಎಂದು ಉದ್ಗಾರ ಎತ್ತುವ ಮೂಲಕ ಕೃಷ್ಣನೇ ಪರತತ್ತ್ವಎಂದು ಹೇಳಿದ್ದಾರೆ. ಇದರಿಂದ ಬ್ರಹ್ಮರುದ್ರಾದಿಗಳು ಪರತತ್ತ್ವರಲ್ಲ ಎಂದು ನಿರೂಪಿಸಿದಂತಾಯಿತು.

किञ्च 'ईशानं भूतभव्यस्य' (काठ.उ-२.१.५) इत्यत्रत्यस्य ईशानपदस्य विष्णुपरत्वे 'मध्ये वामनमासीनम्' (काठ.उ-२.३.३) इति मन्त्रश्रुतवामनश्रुतिरस्ति। वामनो विष्णुरिति अविवादम्।

अपि च शङ्करस्य ईशानत्वं 'एको नारायण आसीत् न ब्रह्मा न च शङ्करः' इति श्रुत्या निराकृतम्। न हि प्रलये स्वयं अविद्यमानः भूतभव्यनाथः इति सम्भवति।

तयोः अभेदपक्षस्तु अशक्यशङ्कः। शङ्करस्य परमत्वं वर्णयता पण्डितेन स्वयं निराकृतेः।

एतेन उपोद्घाते यत्केनचिदुक्तं सर्वा देवता ईशानस्वरूपाण्येवेति तदहोबलपण्डिताशयविरुद्धम्। न सम्भवति चाभेदः। विशिष्टैक्यानङ्गीकारात्। चिन्मात्रैक्यस्य कृमिकीटसाधारण्येन देवतामात्रविषयत्वोक्त्यनुपपत्तेः।

'ಈಶಾನೋ ಭೂತಭವ್ಯಸ್ಯ' ಎನ್ನುವಲ್ಲಿ ಈಶಾನ ಎಂಬ ಪದ ವಿಷ್ಣುಪರವಾಗಿದೆ ಎಂದು ತಿಳಿಸಲು 'ಮಧ್ಯೇ ವಾಮನಮಾಸೀನಂ' ಎಂಬ ಮಂತ್ರಶ್ರುತವಾದ ವಾಮನಶ್ರುತಿ ಇದೆ. ವಾಮನನಾದರೂ ವಿಷ್ಣು ಎನ್ನುವದರಲ್ಲಿ ವಿವಾದವಿಲ್ಲ. ಮತ್ತು ಶಂಕರನ ಈಶಾನತ್ವವೂ 'ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ' ಎಂಬ ಶ್ರುತಿಯಿಂದ ನಿರಾಕರಿಸಲ್ಪಟ್ಟಿದೆ. ಸ್ವಯಂ ಪ್ರಳಯಕಾಲದಲ್ಲಿ ಇಲ್ಲದವರು ಭೂತಭವ್ಯಭವನ್ನಾಥರು ಆಗುವದು ಹೇಗೆ ? ಇನ್ನು ಶಂಕರನಾರಾಯಣರಲ್ಲಿ ಅಭೇದವನ್ನು ಹೇಳುವ ಪಕ್ಷವೂ ಕೂಡುವದಿಲ್ಲ. ಏಕೆಂದರೆ ಶಂಕರನ ಪರಮತ್ವವನ್ನು ವರ್ಣಿಸಿರುವ ಅಹೋಬಲಪಂಡಿತನು ಶಂಕರನಾರಾಯಣರಿಗೆ ಅಭೇದವನ್ನು ನಿರಾಕರಿಸಿದ್ದಾನೆ. ಅಲ್ಲದೇ ಸ್ತುತಿಯ ಉಪೋದ್ಘಾತದಲ್ಲಿ ಎಲ್ಲ ದೇವತೆಗಳು ಈಶಾನಸ್ವರೂಪರು ಎಂದು ಏನು ಹೇಳಿದ್ದಾನೆಯೋ ಅದು ಅಹೋಬಲ ಪಂಡಿತನ ಆಶಯಕ್ಕೆ ವಿರುದ್ಧವಾದದ್ದು. ಕಾರಣ ವಿಶಿಷ್ಟವಾದವುಗಳಲ್ಲಿ ಐಕ್ಯವನ್ನು ಒಪ್ಪುವದಿಲ್ಲ. ಚಿನ್ಮಾತ್ರೈಕ್ಯವು ಅಭಿಪ್ರೇತವಾಗಿದ್ದಲ್ಲಿ ಕ್ರಿಮಿಕೀಟಗಳಲ್ಲಿಯೂ ಈ ಧರ್ಮವು ಸಾಧಾರಣವಾದ ಕಾರಣ ದೇವತೆಗಳಿಗೆ ಮಾತ್ರ ಈಶಾನಸ್ವರೂಪತ್ವವನ್ನು ಹೇಳುವದು ಕೂಡುವದಿಲ್ಲ.

एतेनैव तत्तद्देवतासर्वोत्तमत्वमाश्रित्य प्रवर्तमानाः सर्वा अपि विद्याः प्रमाणमिति प्रास्ताविकोक्तम् अपहसितम्। ईशानस्त्युत्यभिप्रायविरोधात् व्याघाताच्च। न चाधिकारिभेदेन तदुपपत्तिः। वस्तुनि द्वैरूप्यायोगात्। न च पुरुषभेदेन वह्निरवह्निर्घटो वा पट इति युज्यते।

ಹೀಗೆ ಪೂರ್ವೋಕ್ತ ಅನುಪಪತ್ತಿಗಳೂ ಪ್ರಬಲವಾದ್ದರಿಂದ ಪ್ರಾಸ್ತಾವಿಕೆಯಲ್ಲಿ ಹೇಳಿದಂತೆ ಆಯಾ ದೇವತೆಗಳನ್ನು ಸರ್ವೋತ್ತಮರು ಎಂದು ಪ್ರತಿಪಾದಿಸುವ ಎಲ್ಲಾ ಶಾಸ್ತ್ರಗಳೂ ಪ್ರಮಾಣ ಎಂಬುವದು ಅಪಹಾಸದ ವಿಷಯವಾಗುತ್ತದೆ.

ಅಪವಾದಕ್ಕೆ ವಿಷಯವಾದರೂ ಪರವಾಗಿಲ್ಲ. ನಾನು ಎಲ್ಲ ಶಾಸ್ತ್ರಗಳನ್ನು ಪ್ರಮಾಣ ಎನ್ನುತ್ತೇನೆ ಎಂದರೆ ಅದು ಈಶಾನಸ್ತುತಿಯ ಆಶಯಕ್ಕೆ ವಿರುದ್ಧವೂ, ಸ್ವವ್ಯಾಹತವೂ ಆಗಿದೆ.

ಇತರ ದೇವತೆಗಳನ್ನು ಸರ್ವೋತ್ತಮ ಎನ್ನುವ ವಾದವನ್ನು ಅಧಿಕಾರಿಭೇದೇನ ಪ್ರಮಾಣ ಎಂದು ಕೂಡಿಸುತ್ತೇವೆ ಎಂದರೆ ಅದೂ ಸರಿಯಲ್ಲ. ಏಕೆಂದರೆ ಒಂದು ವಸ್ತುವಿನಲ್ಲಿ ದ್ವೈರೂಪ್ಯವು ಕೂಡುವದಿಲ್ಲ. ಪ್ರತ್ಯಕ್ಷವಾಗಿ ನೋಡುವ ವ್ಯಕ್ತಿ ಬೇರೆಯಾದ ಮಾತ್ರಕ್ಕೆ ವಸ್ತು ಬದಲಾಗಲು ಸಾಧ್ಯವಿಲ್ಲ. ಅದಕ್ಕೆ ಶ್ರೀಪಾದಂಗಳವರು ಒಂದು ದೃಷ್ಟಾಂತವನ್ನು ನೀಡುತ್ತಾರೆ. 'ನ ಹಿ ಪುರುಷಭೇದೇನ ವಹ್ನಿರವಹ್ನಿಃ, ಘಟಃ ವಾ ಪಟ ಇತಿ ಯುಜ್ಯತೇ' ನೋಡುವ ಪುರುಷ ಬದಲಾದ ಮಾತ್ರಕ್ಕೆ ವಹ್ನಿ ಅವಹ್ನಿ ಆಗುವದು ಘಟವು ಪಟವಾಗುವದು ಎಲ್ಲಿಯೂ ಕಂಡಿಲ್ಲ ಎನ್ನುತ್ತಾರೆ.

एवमत्र स्तुतिशब्दोऽपि विसङ्गतः । गुणिनिष्ठगुणाभिधानं हि तदर्थः । स्तुत्याद्युपासनं सर्वमपि अविद्यमानविषयकमिति मायिमते विद्यमान-गुणस्तुतिरिति अपसिद्धान्तपराहतम् । गुणानामेवाविद्यमानत्वे तदाश्रयगुणित्वं कफोणिगुडायितम् । न च व्यावहारिकगुणाङ्गीकारेण उक्तदोषनिस्तारः । आविद्यकानां गुणानां नासीदस्ति भविष्यति इति त्रैकालिकनिषेधेन असत्त्वाङ्गीकारात् । द्वैतस्यासत्त्वात् इति शङ्कराचार्यैः गौडपादकारिकायां गुणानां शशविषाणदृष्टान्तेन असत्वस्यैव समर्थनात् । यद्येवमपि अपरमार्थ-गुणाश्रयत्वेन ईशानत्वं हन्त तर्हि वन्ध्यासुतोऽपि कुतो नेशानः ।

### ನಿನ್ನ ಕೃತಿಯ ಹೆಸರಿನಲ್ಲಿರುವ ಸ್ತುತಿ ಪದವೂ ಅನುಚಿತ

ಈಶಾನಸ್ತುತಿ ಎನ್ನುವಲ್ಲಿ ಸ್ತುತಿ ಪದವೂ ಅನುಚಿತ ಎನ್ನುತ್ತಾರೆ ಸ್ವಾಮಿಗಳು. ಸ್ತುತಿಯ ಲಕ್ಷಣ ಹೀಗಿದೆ. 'ಗುಣಿನಿಷ್ಠಗುಣಾಭಿಧಾನಂ ಸ್ತುತಿಃ' ಸ್ತುತಿ ಎಂದರೆ ಗುಣಿಯಲ್ಲಿ ಇರುವ ಗುಣಗಳನ್ನು ಹೇಳುವುದು ಎಂದು ಅರ್ಥ. ಸ್ತುತಿಯೇ ಮೊದಲಾದ ಉಪಾಸನೆ-ಗಳೆಲ್ಲವೂ ಅವಿದ್ಯಮಾನವಿಷಯಕ ಎನ್ನುತ್ತಾರೆ ಮಾಯಾವಾದಿಗಳು. ವಿದ್ಯಮಾನ ಗುಣಗಳ ಸ್ತುತಿಯು ಅವರ ಮತದಲ್ಲಿ ಕೂಡುವದಿಲ್ಲ. ಲೋಕದಲ್ಲಿ ಗುಣಿ ಎನ್ನುವ ವ್ಯವಹಾರ ಹೀಗಿದೆ. ಗುಣಗಳಿರುವ ವಸ್ತು ಗುಣಿ. ಗುಣಗಳಿಲ್ಲದ ವಸ್ತು ಗುಣಿ

ಆಗುವದಿಲ್ಲ. ಹಾಗಾದರೆ ಗುಣಿ ಎನಿಸಿಕೊಳ್ಳಬೇಕಾದರೆ ಗುಣಗಳು ಬೇಕು. ಗುಣಗಳೇ ಅವಿದ್ಯಮಾನವಾಗಿರುವಾಗ ಗುಣಗಳೇ ಆಶ್ರಯವಾಗಿವುಳ್ಳ ಗುಣಿತ್ವವು ಮೊಣಕೈ ಮೇಲೆ ಹತ್ತಿದ ಬೆಲ್ಲದಂತೆ ಉಪಯೋಗಕ್ಕೆ ಬಾರದು.

ಗುಣಗಳು ವ್ಯಾವಹಾರಿಕ ಎಂದು ಒಪ್ಪಿದರೂ ಪೂರ್ವದಲ್ಲಿ ಹೇಳಿದ ದೋಷವನ್ನು ಪರಿಹರಿಸಲು ಸಾಧ್ಯವಿಲ್ಲ. ಕಾರಣ ನಾಸೀದಸ್ತಿ ಭವಿಷ್ಯತಿ ಎಂಬ ತ್ರೈಕಾಲಿಕನಿಷೇಧವನ್ನು ಒಪ್ಪಿ ಆ ಗುಣಗಳನ್ನು ಅಸತ್ ಎಂದು ಅಂಗೀಕರಿಸಲಾಗಿದೆ. ಹೀಗಿದ್ದರೂ ಅಪಾರಮಾರ್ಥಿಕವಾದ ಗುಣಗಳಿಂದ ಈಶಾನತ್ವವನ್ನು ಕೂಡಿಸುತ್ತೇನೆ ಎನ್ನುವದಾದರೆ ಬಂಜೆಯ ಮಗನೇಕೇ ಈಶಾನನಾಗಬಾರದು ?

ತ್ರೈಕಾಲಿಕನಿಷೇಧವನ್ನು ಹೇಳಿದ ಮಾತ್ರಕ್ಕೆ ಅಸತ್ ಎಂದು ಏಕೆ ಹೇಳಬೇಕು ? ಎಂಬ ಮಾಯಾವಾದಿಯ ಶಂಕೆಗೆ ಸ್ವಾಮಿಗಳು ನಿಮ್ಮ ಶಂಕರಾಚಾರ್ಯರು ತಮ್ಮ ಗೌಡಪಾದಕಾರಿಕೆಯಲ್ಲಿ ದ್ವೈತಕ್ಕೆ ಅಸತ್ವವನ್ನು ಹೀಗೇ ಹೇಳಬೇಕು ಎಂದು ತೋರಿಸಿದ್ದಾರೆ. ಎಂದು ಮಾರ್ಮಿಕವಾಗಿ ಉತ್ತರಿಸುತ್ತಾರೆ.

किञ्च अग्रे भेदस्य (श्लोक-४३) मिथ्यात्वं भेदगन्धोऽप्यमूलः इति प्रजल्प्यते । तेन ईशानेन शङ्करेण त्वदादीनामभेदो वर्णितो भवति । तत एवात्मनः शिवाभेदमभ्युपगन्त्रा हि इन्द्रादिजगन्मातुःपार्वत्याः स्वकलत्रत्वमङ्गीकृत-मित्यतोऽपि को नामेशानद्रोहः?

ಪಂಡಿತನು ತನ್ನ ಈಶಾನಸ್ತುತಿಯ 43ನೇ ಶ್ಲೋಕದಲ್ಲಿ 'ಭೇದಗಂಧೋऽಪ್ಯಮೂಲಃ' ಎಂದು ಮಾತ್ಸರ್ಯದಿಂದ ಜಲ್ಪಕಥಾವನ್ನು ಮಾಡಿದ್ದಾನೆ. ಹಾಗೆಯೇ ಭೇದವು ಮಿಥ್ಯಾಎಂದು ಆಕ್ಷೇಪಿಸಿದರೆ ಈಶಾನನಾದ ಶಂಕರನಿಗೆ ನಿಮ್ಮೆಲ್ಲರಿಂದ ಅಭೇದವು ವರ್ಣಿಸಿದಂತಾಗುತ್ತದೆ. ಹೀಗೆ ತಮಗೂ ಶಂಕರನಿಗೂ ಅಭೇದವನ್ನು ಹೇಳುವಂಥವರು ಇಂದ್ರಾದಿಜಗತ್ತಿಗೆ ತಾಯಿಯಾದ ಪಾರ್ವತಿಯನ್ನು ತಮ್ಮ ಮಡದಿ ಎಂಬುದಾಗಿ ಒಪ್ಪಿದರೆ ಏನು ತಾನೇ ಈಶಾನ (ಸ್ವಾಮಿಯ)ದ್ರೋಹವಾಗುವುದು ? (ಈ ವಾಕ್ಯದಲ್ಲಿ ಮಹಾಸ್ವಾಮಿಗಳ ಅಭಿಪ್ರಾಯವನ್ನು ವ್ಯತಿರೇಕವಾಗಿ ತಿಳಿಯುವುದು. ಅಂದರೆ ಮಾಯಾವಾದಿಗಳು ಪಾರ್ವತಿದೇವಿಯರನ್ನು ತಮ್ಮ ಮಡದಿ ಎಂಬುದಾಗಿ ತಿಳಿಯುವದು ಮಹಾ ಅನರ್ಥಕಾರಕ ಎಂದು.)

एवं सर्वं मायामयं मिथ्येति (श्लो-३०) वदता कैलासस्य शुक्तिरूप्य-सादृश्यमङ्गीकृतम् । शङ्करश्चेदेवं शुक्तिरूप्याचलस्येशानोऽभिप्रेतः । का नामेतोऽधिका तन्निन्दा भवेत् । को वा तस्य महिमोक्तस्स्यात् । एवं

शिवनिन्दया तद्द्रोहपर्यवसायिन्याः स्वप्रजल्पगिरः अस्या ईशानस्तुतिरिति नाम व्याचक्षाणस्य अहो अविवेकबलम् अहोबलपण्डितस्य ।

ಇಷ್ಟೇ ಅಲ್ಲದೇ ಸರ್ವಂ ಮಾಯಾಮಯಂ ಎಲ್ಲವೂ ಮಿಥ್ಯೆ ಎಂದು ಹೇಳುವದರಿಂದ ಕೈಲಾಸಕ್ಕೆ ಶುಕ್ತಿರೂಪ್ಯಸಾದೃಶ್ಯವನ್ನು ಹೇಳಿದಂತಾಯಿತು. ಶಂಕರನು ಈ ತರಹದ ಶುಕ್ತಿರೂಪ್ಯಕ್ಕೆ ಸದೃಶವಾದ (ಪ್ರಾತಿಭಾಸಿಕವಾದ) ಅರ್ಥಾತ್ ಪಾರಮಾರ್ಥಿಕವಲ್ಲದ ಕೈಲಾಸಪರ್ವತಕ್ಕೆ ಈಶಾನ ಎಂದು ಬಣ್ಣಿಸಿದರೆ ರುದ್ರದೇವರನ್ನು ಅವಮಾನಿಸುವದಕ್ಕೆ ಇದಕ್ಕಿಂತ ಬೇರೆ ಮಾತು ಏನು ಬೇಕು ? ಈ ರೀತಿಯಾಗಿ ಶಂಕರದ್ರೋಹದಲ್ಲಿ ಪರ್ಯವಸಾನವಾಗುವ ತನ್ನದೇ ಆದ ಜಲ್ಪದ ಮಾತುಗಳಿಂದ ಹೆಣೆದ ಈ ಸ್ತುತಿಗೆ ಈಶಾನಸ್ತುತಿ ಎಂಬ ಹೆಸರು ಇಟ್ಟ ಅಹೋಬಲ ಪಂಡಿತನ ಅಹೋ ಅವಿವೇಕಬಲಂ ಎಂದರೆ ತಪ್ಪಾಗದು.

यच्च शङ्कराचार्याणां शङ्कररूपत्वं (श्लोक-२) उक्तं तत् 'शिवोऽहंभावधीर्भोगे रोगे मृत्युञ्जयार्चकः' इत्युक्तदिशा मृत्युञ्जयार्चकैः शङ्कराचार्यैरेव निराकृतम् ।

ಅಲ್ಲದೇ ಈಶಾನ ಸ್ತುತಿಯ ಎರಡನೆಯ ಶ್ಲೋಕದಲ್ಲಿ ಶಂಕರಾಚಾರ್ಯರಿಗೆ ಶಂಕರರೂಪತ್ವವೇನು ಉಕ್ತವಾಗಿದೆಯೋ ಅದು 'ಶಿವೋಹಂ ಭಾವಧೀರ್ಭೋಗೇ ರೋಗೇ ಮೃತ್ಯುಂಜಯಾರ್ಚಕಃ' ಇತ್ಯಾದಿ ಮಾತುಗಳನ್ನು ಹೇಳಿದ ಶ್ರೀಶಂಕರಭಗವತ್ಪಾದರಿಂದಲೇ ನಿರಾಕರಿಸಲ್ಪಟ್ಟಿದೆ ಅಷ್ಟೇ.

यच्च 'वेदव्यासीयवादार्जितजयविभवस्य' इति भाष्यकृता (श्लोक-३) सूत्रकारस्यापि जितत्वोक्तिः । तत् उत्सूत्रार्थवर्णनपरस्य अद्वैतभाष्यस्य दुर्भाष्यत्वपर्यवसितं तिरस्कार्यम् ।

ಶಂಕರಾಚಾರ್ಯರು ವೇದವ್ಯಾಸದೇವರನ್ನು ವಾದದಲ್ಲಿ ಸೋಲಿಸಿದರು ಎಂಬ ಪ್ರಸಂಗವನ್ನು ಗ್ರಂಥಕಾರರು ತಮ್ಮ ಈಶಾನಸ್ತುತಿಯಲ್ಲಿ 'ವೇದವ್ಯಾಸೀಯ-ವಾದಾರ್ಜಿತಜಯವಿಭವಂ' ಎಂಬುದಾಗಿ ಬಣ್ಣಿಸಿದ್ದಾರೆ. ಇದು ಶಂಕಾರಾಚಾರ್ಯರ ಮಹಿಮೆಯನ್ನು ಹೇಳುವ ಮಾತಾಗದೇ ಆನಂದಮಯಾಧಿಕರಣ ಮೊದಲಾದ ಸ್ಥಳಗಳಲ್ಲಿ ಸೂತ್ರಕ್ಕೆ ವಿರುದ್ಧವಾಗಿ ಭಾಷ್ಯ ರಚಿಸಿ ತಮ್ಮ ಭಾಷ್ಯ ಇದು ದುರ್ಭಾಷ್ಯ ಎಂದು ಹೇಳಿಕೊಳ್ಳುವಲ್ಲಿ ಪರ್ಯವಸಾನಗೊಂಡಂತಾಗಿದೆ. ಆದ್ದರಿಂದ ಈ ಮಾತು (ಶ್ರೀಶಂಕರಾಚಾರ್ಯರು ವೇದವ್ಯಾಸದೇವರನ್ನು ವಾದದಲ್ಲಿ ಸೋಲಿಸಿದರು ಎಂಬ ಮಾತು) ತಿರಸ್ಕಾರಕ್ಕೆ ಅರ್ಹ ಎಂದರೆ ಯಾವ ತಪ್ಪೂ ಆಗಲಾರದು.

यत्तु स्वभाष्यकारस्य पूर्वरूपे दूर्वासाः शुकश्चेत्युक्त्वा तस्य विधिहरिगुरुराट्

(श्लोक-४) इत्युक्तिः साऽपहसनीयतामेवार्हति । दूर्वासाः किल विष्णुचक्रोपतापितः पलायमानः ब्रह्मणो रुद्राच्च व्यसनोपशममनधिगच्छन्नन्ततः हरिणैव त्रातः इति स्मर्यते । स ईदृशः कथं विधिहरिपरमो भवेत् ।

ಇನ್ನೂ ಹೇಳಬೇಕು ಎಂದರೆ ತಮ್ಮ ಭಾಷ್ಯಕಾರರು ಪೂರ್ವದಲ್ಲಿ ದೂರ್ವಾಸಋಷಿಗಳು ಹಾಗೂ ಶುಕಾಚಾರ್ಯರು ಎಂದು ಹೇಳಿ ಅವರ ಕುರಿತು 'ವಿಧಿಹರಿಗುರುರಾಟ್' ಎಂದು ಏನು ಹೇಳಿದ್ದಿದೆಯೋ ಅದು ಅಪಹಾಸಕ್ಕೆ ಯೋಗ್ಯವಾದದ್ದು.

ಕಾರಣ ದೂರ್ವಾಸರು ವಿಷ್ಣುಚಕ್ರ(ಸುದರ್ಶನಚಕ್ರ)ದಿಂದ ತಪ್ತರಾಗಿ ಓಡೋಡಿ ಬಂದು ಬ್ರಹ್ಮದೇವರಿಂದ ಹಾಗೂ ರುದ್ರದೇವರಿಂದ ವ್ಯಸನೋಪಶಮನವನ್ನು ಪಡೆಯದೇ ಕೊನೆಗೆ ವಿಷ್ಣುವಿನ ಬಳಿ ತೆರಳಿ ರಕ್ಷಿತರಾದರು ಎಂದು ಭಾಗವತಾದಿ ಪುರಾಣಗಳಲ್ಲಿ ಸ್ಪಷ್ಟವಾಗಿ ಕೇಳುತ್ತೇವೆ. ಅಂತಹ ದೂರ್ವಾಸರು ವಿಧಿಹರಿಪರಮರು ಹೇಗೆ ಆಗಲು ಸಾಧ್ಯ ?

एवं शुकोऽपि 'त्रिष्वधीशेषु को महान्' इति सर्वोत्तमत्वविमर्शं प्रस्ताव्य भूयांसं श्रद्दधुर्विष्णुं इति निरणैषीत् । तव भाष्यकारस्तु मृत्युञ्जयार्चक इति सुप्रसिद्धमेव ।

ಮತ್ತೊಂದು ಪ್ರಸಂಗದಲ್ಲಿ ಶುಕಾಚಾರ್ಯರು 'ತ್ರಿಶ್ವಧೀಶೇಷು ಕೋ ಮಹಾನ್' ಎಂದು ಶಂಕಿಸಿ ಸರ್ವೋತ್ತಮನು ಯಾರು ಎಂಬ ಆಕ್ಷೇಪಕ್ಕೆ 'ಭೂಯಾಂಸಂ ಶ್ರದ್ದಧುರ್ವಿಷ್ಣುಂ ಎಂದು ವಿಷ್ಣುವನ್ನೇ ಸರ್ವೋತ್ತಮ ಎಂದು ನಿರ್ಣಯಿಸಿದ್ದಾರೆ. ನಿನ್ನ ಭಾಷ್ಯಕಾರರು ಮೃತ್ಯುಂಜಯಾರ್ಚಕರು ಎನ್ನುವದಂತೂ ಅತ್ಯಂತ ಸ್ಪಷ್ಟ ಮಾತು.

वायुस्तुतौ 'ब्रह्माऽहं निर्गुणोऽहं वितथमिदमिति ह्येष पाषण्डवादः' (वायुस्तुति-३०) । इति वर्णितम् । एतदेव गीताचार्येण 'आसुरं पार्थ मे श्रुणु' इति (सप्रतिज्ञमुपक्रम्य) 'ईश्वरोऽहं' 'असत्यमप्रतिष्ठन्ते' इति ब्रुवाणानां आसुरत्वं व्यवस्थाप्य 'यान्त्यधमां गतिं' इत्युपसंहृतम् । कोऽन्योऽस्ति जगदीश्वरः इति वदतो हिरण्यकशिपोः मत्तोऽन्यः कोऽग्र्यभुक् पुमान् इति च कथयतो वेनस्य एवमैक्यवादिनां सृगालवासुदेवादीनां चासुरत्वं शङ्करांशेन शुकेन भागवते तत्र तत्र व्यवस्थापितम् । एवं स्थिते तदेव वायुस्तुतौ प्रमेयं चेद्वर्णितं तर्हि स वादः कथम् (श्लोक-९) चण्डालवादो भवेत् ?

ವಾಯುಸ್ತುತಿಯಲ್ಲಿ 'ಬ್ರಹ್ಮಾಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ' ಎಂದು ವರ್ಣಿಸಲಾಗಿದೆ. ಇದನ್ನೇ ಗೀತಾಚಾರ್ಯರು 'ಆಸುರಂ ಪಾರ್ಥ ಮೇ ಶೃಣು' ಎಂಬುದಾಗಿ ಪ್ರತಿಜ್ಞಾಪೂರ್ವಕ ಪ್ರಾರಂಭಿಸಿ 'ಈಶ್ವರೋಽಹಂ ಅಸತ್ಯಮಪ್ರತಿಷ್ಠಂ ತೇ' ಎಂಬುದಾಗಿ ಹೇಳುವವರನ್ನು ಅಸುರರೆಂದು ಕರೆದಿದ್ದಾರೆ. 'ಯಾಂತ್ಯಧಮಾಂ ಗತಿಂ' ಎಂಬುದಾಗಿ ಉಪಸಂಹಾರದಲ್ಲಿಯೂ ಅಸುರರು ಅಂಧಂತಮಸ್ಸನ್ನು ಹೊಂದುತ್ತಾರೆ ಎಂದು ಹೇಳಿದ್ದಾರೆ. 'ಕೋಽನ್ಯೋಽಸ್ತಿ ಜಗದೀಶ್ವರಃ' ಎಂದು ಹೇಳುವ ಹಿರಣ್ಯಕಶಿಪುವು 'ಮತ್ತೋಽನ್ಯಃ ಕೋಽಗ್ರ್ಯಭುಕ್ ಪುಮಾನ್' ಎಂದು ಹೇಳುವ ವೇನ ಮತ್ತು ಐಕ್ಯ ಹೇಳುವ ಸೃಗಾಲವಾಸುದೇವ ಮೊದಲಾದವರು ಅಸುರರು ಎಂಬುದಾಗಿ ಶಂಕರಾಂಶರಾದ ಶುಕಾಚಾರ್ಯರು ಭಾಗವತದಲ್ಲಿ ಅಲ್ಲಲ್ಲಿ ಸಾರಿದ್ದಾರೆ. ಹೀಗಿರುವಾಗ ಅದೇ ವಾದವನ್ನು ವಾಯುಸ್ತುತಿ ಮಾಡಿದರೆ ಅದು ಚಂಡಾಲವಾದವು ಹೇಗೆ ತಾನೇ ಆಗುವುದು ?

**शङ्कराचार्याः वैधर्म्ये जगतोऽबाध्यतां सत्यधर्मपराक्रमः इति नामव्याख्याने विष्णोर्गुणानामतथतां च वर्णयन्तीत्यत्रानुसन्धेयम् । याऽपि द्वन्द्वमार्गं महेर्ष्यं इति (श्लोक-२५) द्वैतमार्गस्य असूयापरत्वोक्तिः,सा परमतप्रद्वेषमूलैव । उत्तमेषु विषये कुतोऽयं मदुत्तम इति भावना निमित्तकः चित्ततोदः खलु असूया नाम । मुक्तावपी स्वोत्तमाखिलाधीनता यत्सिद्धान्तः स द्वन्द्वमार्गः कथमेव महेर्ष्यो भवेत् । प्रत्युत सर्वोत्तमस्य सर्वदा सर्वगुणापलापेन तदैक्यं अनुसन्दधतां अद्वैतिनामेव महेर्ष्यत्वमिति सुविशदमेव ।**

ಶಂಕರಾಚಾರ್ಯರು ವೈಧರ್ಮ್ಯಾಧಿಕರಣದಲ್ಲಿ ಜಗತ್ತಿನ ಅಬಾಧ್ಯತ್ವವನ್ನು 'ಸತ್ಯಧರ್ಮ-ಪರಾಕ್ರಮಃ' ಎಂಬ ವಿಷ್ಣುಸಹಸ್ರನಾಮದ ವ್ಯಾಖ್ಯಾನ ಪ್ರಸಂಗದಲ್ಲಿ ವಿಷ್ಣುವಿನ ಗುಣಗಳ ಸತ್ಯತ್ವವನ್ನು ವರ್ಣಿಸಿದ್ದಾರೆ. ಎನ್ನುವದನ್ನು ಇಲ್ಲಿ ಅನುಸಂಧಾನಮಾಡಬಹುದಾಗಿದೆ.

ಇನ್ನು 'ದ್ವಂದ್ವಂ ಮಾರ್ಗಂ ಮಹೇರ್ಷ್ಯಂ' ದ್ವೈತಮಾರ್ಗವು ಅಸೂಯಾದಿಂದ ಕೂಡಿದ್ದು ಎಂದು ಈಶಾನಸ್ತುತಿಯ 25ನೇ ಶ್ಲೋಕದಲ್ಲಿ ಹೇಳಲಾಗಿದೆ. ಈ ಮಾತು ಪರಮತದ ಬಗೆಗಿನ ದ್ವೇಷಮೂಲವಾದದ್ದು. ಉತ್ತಮರ ವಿಷಯದಲ್ಲಿ ಈತನು ನನಗಿಂತ ಉತ್ತಮನು ಹೇಗಾದನು ? ಎಂಬ ಮನಃಖೇದವೇ ಅಸೂಯೆ. ಮೋಕ್ಷದಲ್ಲಿಯೂ ಸ್ವೋತ್ತಮರಿಗೆ ಅತ್ಯಂತ ಅಧೀನತೆಯನ್ನು ಸಾರುವ ದ್ವಂದ್ವ(ದ್ವೈತ)ಮಾರ್ಗ ಹೇಗೆ ತಾನೆ ಮಹೇರ್ಷ್ಯ ಆಗಲು ಸಾಧ್ಯ ? ಇದಕ್ಕೆ ವಿಪರೀತವಾಗಿ ಸರ್ವೋತ್ತಮನ ಎಲ್ಲ ಗುಣಗಳನ್ನು ಅಪಲಾಪಮಾಡುವ ಮೂಲಕ ಬ್ರಹ್ಮೈಕ್ಯವನ್ನು ಅನುಸಂಧಾನ ಮಾಡುವ ಅದ್ವೈತವಾದಿಗಳ ಮಹೇರ್ಷ್ಯತ್ವವೇ ಇಲ್ಲಿ ಸ್ಪಷ್ಟವಾಗಿ ತೋರುತ್ತದೆ.

सत्यज्ञानादिपदानां चिन्मात्रपरत्वे वैय्यर्थ्यं पर्यायत्वं च दुष्परिहरमित्यन्यत्र विस्तरः । मिथ्याभूतानां सोपाधिकानां ब्रह्माभेदाभ्युपगमः, अभ्युपगतं ब्रह्मणः सत्यत्वं निरुपाधिकत्वं व्याहन्ति । अतः तदभेदोक्तिः (श्लोक-२७) स्वसिद्धान्तव्याघातकरी ।

ಸತ್ಯಜ್ಞಾನಾದಿಪದಗಳಿಗೆ ಚಿನ್ಮಾತ್ರಪರವಾಗಿ ವ್ಯಾಖ್ಯಾನ ಮಾಡಿದರೆ ವೈಯ್ಯರ್ಥ್ಯ ಹಾಗೂ ಪರ್ಯಾಯತ್ವ ಮೊದಲಾದ ದೋಷಗಳು ಬರುತ್ತವೆ. ಆ ದೋಷಗಳನ್ನು ಪರಿಹರಿಸಲು ಸಾಧ್ಯವಿಲ್ಲ ಎಂಬುದನ್ನು ಬೇರೆ ಕಡೆಗೆ ವಿಸ್ತಾರವಾಗಿ ಹೇಳಲಾಗಿದೆ. ಮಿಥ್ಯಾಭೂತವಾದ ಸೋಪಾಧಿಕವಾದ ಧರ್ಮಗಳಿಗೆ ಬ್ರಹ್ಮನಿಂದ ಅಭೇದವನ್ನು ಒಪ್ಪುವುದು ನೀನೇ ಅಂಗೀಕರಿಸಿದ ಬ್ರಹ್ಮನ ಸತ್ಯತ್ವ ಹಾಗೂ ನಿರುಪಾಧಿಕತ್ವಗಳಿಗೆ ಅತ್ಯಂತ ವಿರುದ್ಧವಾಗಿದೆ. ಆದ್ದರಿಂದ ಈಶಾನಸ್ತುತಿಯ 27ನೇ ಶ್ಲೋಕದಲ್ಲಿ ಹೇಳಿದ ತದಭೇದೋಕ್ತಿಯು ವ್ಯಾಹತವು.

सर्वे तद्धर्माः पारमार्थ्यशून्याः (श्लोक-२९) इति वचनं तत्प्रतिपादकवेदानां अप्रामाण्यपर्यवसायि सत् पण्डितस्य अवैदिकत्वं व्यवस्थापयति । सत्यधर्म-पराक्रम इत्यस्य शाङ्करभाष्यस्य विरुद्धं च ।

'ಸರ್ವೇ ತದ್ಧರ್ಮಾಃ ಪಾರಮಾರ್ಥ್ಯಶೂನ್ಯಾಃ' ಎಂಬ ನಿನ್ನ 29ನೇ ಶ್ಲೋಕದ ವಾದವು ಬ್ರಹ್ಮಪ್ರತಿಪಾದಕವಾದ ವೇದಗಳ ಅಪ್ರಾಮಾಣ್ಯವಿಷಯದಲ್ಲಿ ಪರ್ಯವಸಾನವಾಗು-ವದರಿಂದ ಅಹೋಬಲಪಂಡಿತನ ಅವೈದಿಕತ್ವವನ್ನು ಚೆನ್ನಾಗಿ ಪ್ರತಿಪಾದಿಸುತ್ತದೆ. ಅಲ್ಲದೇ 'ಸತ್ಯಧರ್ಮಪರಾಕ್ರಮಃ' ಎಂಬಲ್ಲಿಯ ಶಾಂಕರಭಾಷ್ಯಕ್ಕೆ ವಿರುದ್ಧವೂ ಆಗಿದೆ.

परव्यामोहनकरी माया स्वाश्रयव्यामोहकरी अविद्या । मायिकं अम्बरादि आविद्यकं शुक्तिरूप्यादि । पूर्वं व्यावहारिकम् । परं च प्रातिभासिकमिति हि परसिद्धान्तः । एवं स्थिते माया अविद्यया भेदशून्या इति (श्लोक-३०) पण्डितस्योक्तिः स्वसिद्धान्ते अपाण्डित्यं द्योतयति ।

ಅದ್ವೈತಮತವು ಎರಡು ತರಹದ ಅವಿದ್ಯೆಯನ್ನು ಅಂಗೀಕರಿಸಿದೆ. 1. ಮಾಯಾ, 2. ಅವಿದ್ಯೆ ಎಂದು. ಮಾಯಾ ಇದು ಪರವ್ಯಾಮೋಹನಕರೀ. ಅವಿದ್ಯೆ ಸ್ವಾಶ್ರಯ-ವ್ಯಾಮೋಹನಕರೀ. 1. ಮಾಯೆಯಿಂದ ಆದದ್ದು ಮಾಯಿಕ. ಅದುವೇ ವ್ಯಾವಹಾರಿಕ ಎನಿಸಿಕೊಳ್ಳುತ್ತದೆ. ಉದಾಹರಣೆಗೆ ಆಕಾಶಾದಿಗಳೂ 2. ಅವಿದ್ಯಾ ಇದು ಪ್ರಾತಿಭಾಸಿಕ ಎಂಬುದು ಮಾಯಾವಾದ ಸಿದ್ಧಾಂತ. ಅದಕ್ಕೆ ಉದಾಹರಣೆ ಶುಕ್ತಿರೂಪ್ಯ ಜಗತ್ತು ಮೊದಲು ವ್ಯಾವಹಾರಿಕವಾಗಿದ್ದು ಮುಂದೆ ಶುಕ್ತಿರೂಪ್ಯದಂತೆ ಪ್ರಾತಿಭಾಸಿಕವಾಗುತ್ತದೆ.

ಹೀಗಿರುವಾಗ 'ಮಾಯಾ ಅವಿದ್ಯಯಾ ಭೇದಶೂನ್ಯಾ' ಎಂಬ 30ನೇ ಶ್ಲೋಕದ ಮಾಯಾಅವಿದ್ಯೆಗಳಲ್ಲಿ ಭೇದವಿಲ್ಲ ಎಂಬ ಪಂಡಿತನ ಮಾತು ತನಗೆ ತನ್ನ ಸಿದ್ಧಾಂತದ ಪಾಂಡಿತ್ಯವಿಲ್ಲ ಎಂಬುದನ್ನು ಎತ್ತಿ ತೋರಿಸುತ್ತದೆ.

यदुक्तं स्वमतस्य बोद्धमतेन किञ्चित्साम्यं (श्लोक-३१) इत्यादि तदानन्दगिर्याशयविरुद्धम् । तथा हि आनन्दगिरिविरचिते शङ्करविजये भट्टाचार्यः परमगुरुमिदमुवाच । जाग्रत्कालानागतो नूतनो बौद्धतरः कस्मादिहागत्य उत्थापयसि इति । तेन तरप्प्रत्ययेन बौद्धमतप्रतिप्रसवरूपोऽतिशयो बोध्यते । अत्र परमगुरुरिति व्यपदिष्टः शङ्कराचार्य एव ।

ತನ್ನ ಮತ ಬೌದ್ಧಮತದಿಂದ ಕಿಂಚಿತ್ಸಮಾನ ಎಂದು ಏನು ಹೇಳಲಾಗಿದೆಯೋ ಅದು ಆನಂದಗಿರಿಯ ಆಶಯಕ್ಕೆ ವಿರುದ್ಧವಾದುದು. ಆನಂದಗಿರಿವಿರಚಿತ ಶಂಕರವಿಜಯದಲ್ಲಿ 'ಭಟ್ಟಾಚಾರ್ಯಃ ಪರಮಗುರುಮಿದಮುವಾಚ ಜಾಗ್ರತ್ಕಾಲಾನಾಗತೋ ನೂತನೋ ಬೌದ್ಧತರಃ ಕಸ್ಮಾದಿಹಾಗತ್ಯ ಉತ್ತಾಪಯಸಿ' ಎಂದಿದೆ. ಬೌದ್ಧತರ ಎನ್ನುವಲ್ಲಿ ತರಪ್ಪ್ರತ್ಯಯದಿಂದ ಬೌದ್ಧಮತಪ್ರತಿಪ್ರಸವರೂಪವಾದ ಅತಿಶಯ ತಿಳಿಯಲ್ಪಡುತ್ತದೆ. ಇಲ್ಲಿ ಪರಮಗುರುಗಳು ಎಂದು ಕರೆಯಿಸಿಕೊಂಡವರು ಶಂಕರಾಚಾರ್ಯರು.

प्रमेयसाम्यं तु मतयोः वैधर्म्यनयीयशाङ्करभाष्येण सुस्पष्टम् । तत्र हि बौद्धदलनव्याजेन स्वदर्शननिराकृतिः अतिरोहिता । तदुक्तं योग्यान्योजयितुं धिया विमलया नाभाव इत्यादिभिः । सूत्रैः खण्डितमाह बौद्धदलनव्याजेन तच्छङ्कर इति ।

ಬೌದ್ಧಶಾಂಕರ ಮತಗಳಲ್ಲಿನ ಪ್ರಮೇಯಸಾಮ್ಯವಾದರೂ ವೈಧರ್ಮ್ಯಾಧಿಕರಣ-ಶಾಂಕರಭಾಷ್ಯದಿಂದ ಸ್ಪಷ್ಟ. ಅಲ್ಲಿ ಬೌದ್ಧರನ್ನು ನಿರಾಕರಿಸುವ ನೆಪದಿಂದ ತಮ್ಮ ದರ್ಶನವನ್ನೇ ನಿರಾಕರಿಸಿದ್ದೂ ಸ್ಪಷ್ಟ. 'ಯೋಗ್ಯಾನ್ಯೋಜಯಿತುಂ ಧಿಯಾ ವಿಮಲಯಾ ನಾಭಾವ ಇತ್ಯಾದಿಭಿಃ ಸೂತ್ರೈಃ ಖಂಡಿತಮಾಹ ಬೌದ್ಧದಲನವ್ಯಾಜೇನ ತಚ್ಛಂಕರಃ' ಎಂದು. ಹೇಳಲಾಗಿದೆ.

यदपि 'त्वद्देवो बाह्यदेवः' इत्यादिना (श्लोक-३९) वायुः देवबाह्य इति वायोर्निन्दा सा स्वाचार्यद्रोहकरी । अयं वै नः श्रेष्ठः इत्यस्य शाङ्करभाष्ये भामत्यां च सर्वेन्द्रियगणाभिमानिषु वायोः श्रेष्ठत्वं पौर्वापर्यपर्यालोचनया तैस्समर्थितम् ।

'ತ್ವದ್ದೇವೋ ಬಾಹ್ಯದೇವಃ' ಎಂಬುದಾಗಿ ಈಶಾನಸ್ತುತಿಯ 39ನೇ ಶ್ಲೋಕದಲ್ಲಿ ವಾಯುದೇವರು ದೇವಬಾಹ್ಯರು ಎಂಬ ವಾಯುದೇವರ ನಿಂದನೆ ಏನಿದೆಯೋ ಅದು ಸ್ವಾಚಾರ್ಯದ್ರೋಹಕರೀ (ತಮ್ಮ ಪೂರ್ವಾಚಾರ್ಯರಿಗೆ ದ್ರೋಹ ಮಾಡಿದಂತೆ ಆಗುವದು) ಆಗುವುದು. ಹೇಗೆಂದರೆ 'ಅಯಂ ವೈ ನಃ ಶ್ರೇಷ್ಠಃ' ಎಂಬುವದರ ಶಾಂಕರಭಾಷ್ಯದಲ್ಲಿ ಹಾಗೂ ಭಾಮತಿಯಲ್ಲಿ ಎಲ್ಲ ಇಂದ್ರಿಯಾಭಿಮಾನಿದೇವತೆಗಳ ಸಮೂಹದಲ್ಲಿ ವಾಯುದೇವರ ಶ್ರೇಷ್ಠತ್ವವು ಸಮರ್ಥಿತವಾಗಿದೆ.

या च मायिगोमायसूनो इति (श्लोक-४०) पण्डिताचार्याणां सोल्लासनिन्दा सा तत्पितुः गुहार्यस्य यच्चरित्रं तदपरिज्ञानमूला। तेन खलु पूर्वमपि 'गुणाढ्यं स्मर देवं सुत वासुदेवमेव' इति स्वसूनुं पण्डिताचार्यं प्रत्युपदेशः कृतः इति सुप्रसिद्धम्। तेन तस्य मायिभावो नासीदेवेति ज्ञायते।

यत्तु भेदस्सर्वोऽप्यनित्यः (श्लोक-४३) इति अनित्यत्वोक्तिः सा मिथ्यावादप्रतिकूलैवेति स्फुटमेव।

'ಮಾಯಿಗೋಮಾಯುಸೂನೋ' ಎಂಬುದಾಗಿ ಪಂಡಿತಾಚಾರ್ಯರ ಉಲ್ಲಾಸ-ಭರಿತವಾದ ನಿಂದೆಯೇನಿದೆಯೋ ಅದು ತ್ರಿವಿಕ್ರಮಪಂಡಿತಾಚಾರ್ಯರ ತಂದೆಯಾದ ಸುಬ್ರಹ್ಮಣ್ಯಪಂಡಿತರ ಚರಿತ್ರೆಯ ಕುರಿತಾದ ಪರಿಜ್ಞಾನವಿಲ್ಲದಿರುವಿಕೆ ಇಂದಾದದ್ದು. ಪೂರ್ವದಲ್ಲಿ 'ಗುಣಾಢ್ಯಂ ಸ್ಮರ ದೇವಂ ಸುತ ವಾಸುದೇವಮೇವ' ಎಂಬುದಾಗಿ ತಮ್ಮ ಮಕ್ಕಳಿಗೆ ಉಪದೇಶಿಸಿರುವರೆಂದು ಪ್ರಸಿದ್ಧವು. ಇದರಿಂದ ಸುಬ್ರಹ್ಮಣ್ಯಪಂಡಿತರು ಮಾಯಾವಾದಿಗಳಲ್ಲ ಎಂಬುದು ಅತ್ಯಂತ ಸ್ಪಷ್ಟವಾಗುತ್ತದೆ.

ಭೇದಃ ಸರ್ವೋಽಪ್ಯನಿತ್ಯಃ ಎಂಬುದು ಮಿಥ್ಯಾವಾದಕ್ಕೆ ವಿರುದ್ಧವಾದದ್ದು ಎಂಬುದು ಪ್ರಸಿದ್ಧವೇ ಆಗಿದೆ.

यच्च द्वैतिनां सर्वदर्शनानां चान्तेऽश्लीलं गर्हणं (श्लोक-४८) तन्नाद्वैतिनः शोभावहम्। परमतेऽनुपपत्तिसद्भावं दृष्ट्वा खलु तद्गर्हणं विधेयम्। न च तथा सम्भवति। मायिमते अनुपपत्तीनां अलङ्कारत्वमङ्गीकृतम्। अतः तत्सद्भावे परमतानां प्रशंसैव तवोचिता विधातुम्। अन्यथा सर्वानुपपत्तिभाजनस्य स्वमतस्यैव सुतरां गर्हणं कृतं स्यात्।

ಎಲ್ಲ ದರ್ಶನಗಳ ಕೊನೆಯಲ್ಲಿ ದ್ವೈತಿಗಳ ಅಶ್ಲೀಲನಿಂದನೆ ಏನಿದೆಯೋ ಅದು ಅದ್ವೈತಿ-ಗಳಿಗೆ ಶೋಭಿಸುವಂತಹದ್ದಲ್ಲ. ಪರಮತದಲ್ಲಿಯ ಅನೌಚಿತ್ಯವನ್ನು ಕಂಡು ಅದರ

ನಿಂದೆ ಮಾಡಬೇಕು. ಅದಾದರೂ ದ್ವೈತಮತಗ್ರಂಥಗಳಲ್ಲಿ ಇರುವುದಿಲ್ಲ. ಮಾಯಿ-ಮತದಲ್ಲಿ ಅನೌಚಿತ್ಯಗಳು (ಅನುಪಪತ್ತಿಗಳು) ಅಲಂಕಾರವೇ ಆಗಿವೆ ಎಂದು ಒಪ್ಪಲಾಗಿದೆ. ಆದ್ದರಿಂದ ನೀನು ಪರಮತಗಳ ಪ್ರಶಂಸೆಯನ್ನು ಮಾಡಬೇಕು. ಇಲ್ಲದಿದ್ದರೆ ಎಲ್ಲ ಅನುಪಪತ್ತಿಗಳನ್ನು ಹೊಂದಿರುವ ನಿನ್ನ ಮತವನ್ನೇ ಸುತರಾಂ ನಿಂದೆ ಮಾಡಿದಂತಾಗುತ್ತದೆ.

**मध्वमते नानुपपत्तिलेशोऽपि इत्यन्यदेतत् ।**

**सकलप्रमाणविषयः निर्गुणं ब्रह्म सत्यं सकलप्रमाणसिद्धम् जगन्मिथ्या इति उपसंहृतिः शशविषाणं सत्यं गोविषाणं तत्रारोपितं मिथ्येत्युपसंहारं अनुकरोति ।**

ಮಧ್ವಮತದಲ್ಲಾದರೂ ಅನುಪಪತ್ತಿಯ ಲವಲೇಶವೂ ಇಲ್ಲ ಎಂಬುದು ಮತ್ತೊಂದು ಮಾತು. ಸಕಲಪ್ರಮಾಣವಿಷಯನಾಗದ ನಿರ್ಗುಣ ಬ್ರಹ್ಮ ಸತ್ಯ ಸಕಲಪ್ರಮಾಣ-ವಿಷಯವಾದ ಜಗತ್ತು ಮಿಥ್ಯಾ ಎಂಬ ನಿನ್ನ ಉಪಸಂಹಾರದ ಮಾತು ಶಶವಿಷಾಣವು ಸತ್ಯ ಗೋವಿಷಾಣವು ಅಲ್ಲಿ ಆರೋಪಿತ (ಮಿಥ್ಯಾ) ಎಂಬ ಉಪಸಂಹಾರವಚನವನ್ನು ಅನುಸರಿಸುವಂತಿದೆ.

**श्रीसत्यध्यानतीर्थश्रीचरणनानां तदनुयायिनां पीठाधिपतीनां च निन्दा अवास्तवविषयिणी उपेक्षणीया । दिवान्धानां निन्दया न चक्षुष्मतः दिवसेश्वरस्य वा किञ्चिद्धीयते ।**

ಶ್ರೀಸತ್ಯಧ್ಯಾನತೀರ್ಥಶ್ರೀಚರಣರ ಹಾಗೂ ತದನುಯಾಯಿಪೀಠಾಧಿಪತಿಗಳ ನಿಂದೆಯು ಅವಾಸ್ತವ. ಆದ್ದರಿಂದಲೇ ಉಪೇಕ್ಷಿಸಲು ಅರ್ಹ. ಹಗಲಿನಲ್ಲಿ ಕುರುಡರಾದವರ ನಿಂದೆಯಿಂದ ಕಣ್ಣುಳ್ಳವರಿಗೆ ಅಥವಾ ಸೂರ್ಯನಿಗೆ ಆಗುವದಾದರೂ ಏನು ?

**इतः परमपि अद्वैतिसुहृद एवं विधात्परनिन्दापराद्व्यापाराद्विरमेयु-रित्याशास्महे ।**

**श्री वायुस्तुतेः सकलवैदिकप्रमेयसारसम्भृतत्वं युक्तिमल्लिकायां श्री वादिराजतीर्थश्रीचरणैः फलसौरभे सप्रमाणं संस्थापितं सुधीभिरनुसन्धेयम् ।**

ಇನ್ನು ಮುಂದಾದರೂ ಅದ್ವೈತಿಮಿತ್ರರು ಈ ರೀತಿ ಪರನಿಂದಾತ್ಮಕವಾದ ವ್ಯಾಪಾರ-ದಿಂದ ವಿರಾಮವನ್ನು ತೆಗೆದುಕೊಳ್ಳುವರು ಎಂದು ಆಶಿಸುತ್ತೇವೆ.

ವಾಯುಸ್ತುತಿಯ ಸಕಲವೈದಿಕಸಾರವು ಶ್ರೀವಾದಿರಾಜತೀರ್ಥ ಶ್ರೀಚರಣರಿಂದ ಯುಕ್ತಿಮಲ್ಲಿಕೆಯ ಫಲಸೌರಭದಲ್ಲಿ ಸಪ್ರಮಾಣವಾಗಿ ಸ್ಥಾಪಿತವಾಗಿದೆ. ಜ್ಞಾನಿಗಳು ಅಲ್ಲಿ ಹೇಳಿದ್ದನ್ನು ಅನುಸಂಧಾನಮಾಡುತ್ತಾರೆ ಎಂದು ಭಾವಿಸುತ್ತೇವೆ.

यत्कारुण्यबलादेव लब्धात्मेयं कृतिर्मम ।
श्रीशे समर्पयत्वेनां सत्याभिज्ञगुरूत्तमः ॥

ಯಾರ ಕಾರುಣ್ಯಬಲದಿಂದ ನನ್ನ ಈ ಕೃತಿಯು ಜೀವತುಂಬಿಕೊಂಡಿತೋ ಅಂತಹ ಸತ್ಯಾಭಿಜ್ಞಗುರುಶ್ರೇಷ್ಠರು ಇದನ್ನು ಶ್ರೀಶನಲ್ಲಿ ಸಮರ್ಪಿಸಲಿ.

ಗುರುಗಳ ಜನ್ಮಶತಮಾನೋತ್ಸವನಿಮಿತ್ತ ಅವರ ಸೇವಾರೂಪದಲ್ಲಿ ಅವರ ಪ್ರೀತಿಗಾಗಿ ಈ ವಾಯುಸ್ತುತಿಮಂಡನದ ಕನ್ನಡದ ಅನುವಾದವನ್ನು ಯಥಾಮತಿ ಮಾಡಿದ್ದೇನೆ ಈ ಕರ್ಮದಿಂದ ಹರಿವಾಯುಗುರುಗಳು ಪ್ರೀತರಾಗಲಿ.



## ಪರಿಶಿಷ್ಟ-2

## ಭಾವಪ್ರದೀಪಿಕಾವ್ಯಾಖ್ಯಾನ ವಿಶೇಷಗಳು

★ 1ನೇ ಶ್ಲೋಕ-ಶ್ರೀ ಮದ್ವಿಷ್ಣು ...ಎನ್ನುವ ಕಡೆಗೆ ಭಾವಪ್ರದೀಪಿಕಾಕಾರರು ವಿಶಿಷ್ಟ ವ್ಯಾಖ್ಯಾನವನ್ನು ಮಾಡಿದ್ದಾರೆ. ಅದರ ವಿವರ ಹೀಗಿದೆ.

ಶ್ರೀಮತ್ ಎನ್ನುವದಕ್ಕೆ ಸಾಮಾನ್ಯವಾಗಿ ಶ್ರೀ ಎಂದರೆ ಲಕ್ಷ್ಮೀದೇವಿ ಅಥವಾ ಸಂಪತ್ತು ಅದರಿಂದ ಕೂಡಿದವನು ಎಂದು. ಇಲ್ಲಿ ವ್ಯಾಖ್ಯಾನಕಾರರು ಶ್ರೀ ಎನ್ನುವದಕ್ಕೆ ಶ್ರಯತೇ ಇತಿ ಶ್ರೀಃ ಎಂದು ವ್ಯುತ್ಪತ್ತಿ ತೋರಿಸಿದ್ದಾರೆ. ಅಂದರೆ ಕರ್ತುಃ ಕರ್ಮಾ-ಪೇಕ್ಷಾಯಾಂ ಯೋಗ್ಯೇತರಾನ್ವಿತಸ್ವಾರ್ಥೇ ಶಕ್ತಿಃ ಎಂದು ಹೇಳಿದಂತೆ ವಿಷ್ಣುಂ ಶ್ರಯತೇ ಇತಿ ಶ್ರೀಃ ಅಥವಾ ಅಸಾಧಾರಣ್ಯೇನ ವ್ಯಪದೇಶಾಃ ಭವಂತಿ ಎಂಬ ನ್ಯಾಯದಂತೆ ನಿರಂತರ ವಿಷ್ಣುವನ್ನು ಆಶ್ರಯಿಸಿದವಳು ಅನ್ನುವದಕ್ಕಾಗಿ ಶ್ರೀ ಎಂದರೆ ಲಕ್ಷ್ಮೀದೇವಿ. ಅಥವಾ ಹೀಗೂ ಅರ್ಥೈಸಬಹುದು. ಕರ್ಮಣಃ ಕರ್ತಾಕಾಂಕ್ಷಾಯಾಂ ಬ್ರಹ್ಮಾದಿಭಿ-ರಾಶ್ರೀಯತೇ ಸೇವ್ಯತೇ ಸಾ ಶ್ರೀಃ ಶ್ರೀಞ್ ಸೇವಾಯಾಂ ಎಂಬ ಧಾತುವಿಗೆ ಅನುಗುಣವಾಗಿ ಬ್ರಹ್ಮಾದಿಗಳಿಂದ ಸೇವ್ಯಳಾದವಳು. ಅಂತಹ ಲಕ್ಷ್ಮೀದೇವಿಯಿಂದ ನಿತ್ಯ ಕೂಡಿದವನು ಶ್ರೀಮಾನ್. ನಿತ್ಯಕೂಡಿದವನು ಎಂಬ ಅರ್ಥ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ ಎನ್ನುವ ಸೂತ್ರದಿಂದ ನಿತ್ಯಯೋಗ ಇದ್ದಾಗ ಮತುಪ್ ಪ್ರತ್ಯಯ ಬರುತ್ತದೆ ಎಂಬುದಕ್ಕೆ

ಅನುಗುಣವಾಗಿ ನಿತ್ಯ ಲಕ್ಷ್ಮೀಯಿಂದ ಕೂಡಿದವನು ಎಂಬ ಅರ್ಥವನ್ನು ಮಾಡಲಾಗಿದೆ. ಇನ್ನು ವಿಷ್ಣುಶಬ್ದದ ಅರ್ಥವನ್ನು ತಿಳಿಯುವದಾದರೆ ವಿಷ್ಲೃವ್ಯಾಪ್ತೌ ಎಂಬ ಧಾತುವಿಗೆ ಔಣಾದಿಕ ನುಕ್ ಪ್ರತ್ಯಯ ಬಂದು ಜಗತ್ತನ್ನು ವ್ಯಾಪಿಸಿದವನು ಎನ್ನುವ ಅರ್ಥದಲ್ಲಿ ವಿಷ್ಣುಶಬ್ದವನ್ನು ಬಳಸಲಾಗಿದೆ. 'ದೇಶತಃಕಾಲತಃ ಶ್ಚೈವ ಗುಣತಃ ತ್ರಿಧಾ ತತಿಃ। ಸಾ ಸಮಸ್ತಾ ಹರೇರೇವ ನ ಹ್ಯನ್ಯೇ ಪೂರ್ಣಸದ್ಗುಣಾಃ' ॥ (ಗೀ.ತಾತ್ಪರ್ಯ.2.17) ಗೀತಾತಾತ್ಪರ್ಯದಲ್ಲಿ ಹೇಳಿದಂತೆ ದೇಶ ಕಾಲ ಗುಣಗಳಿಂದ ವ್ಯಾಪ್ತನಾದವನು ವಿಷ್ಣು ಎಂದು ಹೇಳಿದಂತಾಗಿದೆ. ಅಥವಾ ವಿಶ ಪ್ರವೇಶನೇ ಎಂಬ ಧಾತುವನ್ನು ಇಟ್ಟುಕೊಳ್ಳುವದಾದರೆ ಸರ್ವತ್ರ ಅಂತರ್ಯಾಮಿತಯಾ ಪ್ರವಿಷ್ಟತ್ವಾತ್ ವಿಷ್ಣುಃ ಎಂದೂ ಅರ್ಥವನ್ನು ತಿಳಿಯಬಹುದು. ಅದಕ್ಕೆ ವ್ಯಾಖ್ಯಾನಕಾರರು ಮೋಕ್ಷಧರ್ಮದ ವಚನವನ್ನು ಪ್ರಮಾಣವಾಗಿಯೂ ನೀಡಿದ್ದಾರೆ.

ಮೋಕ್ಷಧರ್ಮೇ-

'गतिश्च सर्वभूतानां प्रजनश्चापि भारत ।
व्याप्ते मे रोदसी पार्थ कान्तिश्चाभ्यधिका मम ।
अधिभूतं निविष्टश्च तदिच्छुश्चास्मि भारत ।
क्रमणाच्चाप्यहं पार्थ विष्णुरित्यभिसंज्ञितः' इति ।

ಅಥವಾ ಅತ್ಯುತ್ಕೃಷ್ಟತ್ವಾತ್ ಪರಿಪೂರ್ಣಬಲಚೇಷ್ಟಾಸ್ವಾಮಿತ್ವಶೀಲತ್ವಾತ್ ವಿಷ್ಣುಃ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ (ಐತರೇಯ.ಉ.ಆ-3.ಅ-2 ಮಂ-6) ಎಂಬ ಶ್ರುತಿಯೇ ವಿಷ್ಣುಶಬ್ದದ ಅರ್ಥವನ್ನು ನಿರ್ವಚನಮಾಡುವಲ್ಲಿ ಪ್ರಮಾಣವಾಗಿದೆ. ಅಥವಾ ವಿಪೂರ್ವಾತ್ ಷ್ಣು ಪ್ರಸವೇ ಎಂಬ ಧಾತುವನ್ನು ಇಟ್ಟುಕೊಂಡಾಗ ವಿವಿಧವಾದ ಜಗತ್ತನ್ನು ಸೃಷ್ಟಿಸುತ್ತಾನೆ ಆದ್ದರಿಂದ ವಿಷ್ಣು. ಅಥವಾ ನಾನಾ ಜನರಿಗೆ ನಾನಾವಿಧವಾದ ಪುರುಷಾರ್ಥಗಳನ್ನು ಕೊಡುತ್ತಾನೆ ಆದ್ದರಿಂದ ವಿಷ್ಣು. ಹೀಗೆ ವಿವರಣೆ ಮಾಡುವದರಿಂದ ಲಕ್ಷ್ಮೀದೇವಿಗೆ ಭಗವನ್ನಿತ್ಯಾವಿಯೋಗಿತ್ವ ಭಗವಂತನಿಗೆ ವಂದ್ಯತ್ವಪ್ರಯೋಜಕವಾದ ವೈಶಿಷ್ಟ್ಯಾದಿಗಳನ್ನು ಹೇಳಿದಂತಾಯಿತು ಎನ್ನುತ್ತಾರೆ.

★ 4ನೇ ಶ್ಲೋಕ-ಮಧ್ವಾಖ್ಯಂ- 'ಮಧ್ವಿತ್ಯಾನಂದ ಉದ್ದಿಷ್ಟ' ಎಂಬ ತೈತ್ತರೀಯ ಭಾಷ್ಯ- ವಚನಾನುಸಾರವಾಗಿ ಮಧು ಶಬ್ದವು ಆನಂದವಾಚಕವು. ಖ್ಯಾಧಾತುವಿನಿಂದ ನಿಷ್ಪನ್ನವಾದ ಆಖ್ಯಾ ಶಬ್ದವು ಖ್ಯಾತಾದಿ ಶಬ್ದಗಳಂತೆ ಜ್ಞಾನವಾಚಕವಾಗಿದೆ. ಅಂದರೆ ಮಧ್ವಾಖ್ಯಂ ಎಂಬ ಪದಕ್ಕೆ ಆನಂದ ಹಾಗೂ ಜ್ಞಾನಪೂರ್ಣರು ಎಂದು ಅರ್ಥ.

ಪಾರಮೇಷ್ಠ್ಯಮ್- ಪರಮೇ ತಿಷ್ಠತಿ ಇತಿ ಪರಮೇಷ್ಠೀ । ಪರಮೇಷ್ಠಿನಃ ಇದಂ ಪಾರಮೇಷ್ಠ್ಯಮ್ । ಭಗವಂತನ ಸ್ಥಾನವಾದ ವೈಕುಂಠಾದಿಗಳಲ್ಲಿ ಇರುವವರು.

'ವಾಯುರ್ಹಿ ಬ್ರಹ್ಮತಾಮೇತಿ ತಸ್ಮಾದ್ ಬ್ರಹ್ಮೈವ ಸ ಸ್ಮೃತಃ' ಎಂಬ ವಚನಾನುಸಾರವಾಗಿ ವಾಯುದೇವರು ಬ್ರಹ್ಮಪದವಿಯನ್ನು ಹೊಂದುವವರು ಎಂಬುದನ್ನೂ ಇಲ್ಲಿ ತಿಳಿಯಬಹುದಾಗಿದೆ.

★ 7ನೇ ಶ್ಲೋಕ-ಭಾವಪ್ರದೀಪಿಕಾಕಾರರು ದ್ಯುಭರ್ತೇಃ ಎಂಬ ಶಬ್ದಕ್ಕೆ ವಿದ್ಯುತ್‌ಪತಿ ಎಂದು ಅರ್ಥ ಹೇಳಿ ಅದಕ್ಕೆ ಪ್ರಮಾಣವನ್ನು ಹೀಗೆ ಕೊಟ್ಟಿದ್ದಾರೆ.

1. ದ್ಯೌರ್ವಾ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ।

2. ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ ಎಂಬ ಶ್ರುತಿಯಿದೆ. ಅದರಂತೆ ಸ್ಮೃತಿಯನ್ನು ಉದಾಹರಿಸುತ್ತಾರೆ.

1. ವಿದ್ಯುತ್ಪತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ ।
   ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ॥ ಎಂದು.

★ 12ನೇ ಶ್ಲೋಕ. ಈ ಶ್ಲೋಕದಲ್ಲಿ ರಾಜಸಜೀವರು ಶ್ರೀಮದಾಚಾರ್ಯರನ್ನು ಹೊಂದಿಯೂ ಉದಾಸೀನ ಮಾಡುತ್ತಾರೆ ಕಾರಣ ಅವರು ಭಗವಂತನ ಜ್ಞಾನವನ್ನು ಹೊಂದದೇ ನಿತ್ಯಸಂಸಾರಿಗಳಾಗುತ್ತಾರೆ ಎಂದು ಹೇಳಲಾಗಿದೆ.

ಇಲ್ಲಿ ಭಾವಪ್ರದೀಪಿಕಾಕಾರರು ರಾಜಸರು ಅಸ್ತಪ್ರಾಯವಾದ ಸುಖವುಳ್ಳವರಾಗಿ ಸಂಸಾರದಲ್ಲಿಯೇ ಉಳಿಯುತ್ತಾರೆ ಎಂದು ಹೇಳುವದರಿಂದ ತಾಮಸರು ವಿಪರೀತವಾಗಿ ತಿಳಿದು ತಮಸ್ಸನ್ನು ಹೊಂದುತ್ತಾರೆ ಎಂದು ಹೇಳಿದಂತಾಯಿತು ಎನ್ನುತಾರೆ. ಇಲ್ಲಿ ಒಟ್ಟು ಅಭಿಪ್ರಾಯ ಇಷ್ಟು. ಈ ಹನ್ನೆರಡನೆಯ ಶ್ಲೋಕದಲ್ಲಿ ರಾಜಸಜೀವರು ತಮಸ್ಸನ್ನು ಕುರಿತು ಹೋಗುವದಿಲ್ಲ ಎಂದು ಹೇಳೋಣದರಿಂದ ತಾಮಸರು ತಮಸ್ಸಿಗೆ ಹೋಗು-ತ್ತಾರೆ ಎಂದು ಹೇಳಿದಂತಾಯಿತು ಎಂದು.

★ 14ನೇ ಶ್ಲೋಕ-ಆಶುದೇವ ಎಂಬ ಪದವನ್ನು ಆಶು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಆಶುದೇವ ಎಂಬುದು ಒಂದು ಸಮಸ್ತ ಪದ. ಅಶ್ನುತೇ ಸರ್ವಂ ವ್ಯಾಪ್ನೋತಿ ಇತಿ ಆಶುಃ ಆಶುಶ್ಚಾಸೌ ದೇವಶ್ಚ ಆಶುದೇವಃ ತತ್ಸಂಬುದ್ಧಿಃ ಹೇ ಆಶುದೇವ ಅಂದರೆ ದೇಶತಃ ಕಾಲತಃ ವ್ಯಾಪ್ತನಾದ ಕ್ರೀಡಾದಿಗುಣವಿಶಿಷ್ಟನಾದವನೇ ಎಂದು ಅರ್ಥ.

★ 15ನೇ ಶ್ಲೋಕ- ವಿಷ್ಣೋರತ್ಯುತ್ತಮತ್ವಾತ್ ಎಂಬ ಶ್ಲೋಕದಲ್ಲಿ ಯಾರು ದೇವತೆಗಳನ್ನು ಇವರು ವಿಷ್ಣುವಿನ ಪರಿವಾರದೇವತೆಗಳು ಎಂದು ತಾರತಮ್ಯಕ್ಕೆ ಅನುಗುಣವಾಗಿ ಭಕ್ತಿಯನ್ನು ಮಾಡುತ್ತಾರೋ ಅವರನ್ನು ವಾಯುದೇವರು ಚೆನ್ನಾಗಿ ರಕ್ಷಿಸುತ್ತಾರೆ ಎಂಬ ಮೇಲ್ನೋಟದ ಒಂದು ಅರ್ಥವಾದರೆ ವಿಶೇಷಾರ್ಥವನ್ನು ಭಾವಪ್ರದೀಪಿಕಾಕಾರರು ಹೀಗೆ ಹೇಳುತ್ತಾರೆ. ಯಾರು ಪರಮಾತ್ಮನ ಸುತ್ತಲೂ

ಪರಿವಾರಾತ್ಮನಾ ಇರುವ ಕೃದ್ದೋಲ್ಕಾದಿರೂಪಗಳಲ್ಲಿ ಪರಮಾತ್ಮನನ್ನು ಅನುಸಂಧಾನ ಮಾಡುತ್ತಾರೋ ಅವರನ್ನು ವಾಯುದೇವರು ಚೆನ್ನಾಗಿ ರಕ್ಷಿಸ್ತುತಾರೆ. ಅಥವಾ ದೇವತೆಗಳ ತಾರತಮ್ಯವನ್ನು ತಿಳಿಯುವದರ ಜೊತೆಗೆ ಆ ದೇವತೆಗಳಲ್ಲಿ ಅಂತರ್ಗತನಾದವನು ಭಗವಂತ ಎಂದು ಯಾರು ತಿಳಿಯುತ್ತಾರೋ ಅವರನ್ನು ವಾಯುದೇವರು ಚೆನ್ನಾಗಿ ರಕ್ಷಿಸುತ್ತಾರೆ.

★ 17ನೇ ಶ್ಲೋಕ–ಬ್ರಹ್ಮಚರ್ಯಾದಿಧರ್ಮೈಃ ಎನ್ನುವಲ್ಲಿ ಭಾವಪ್ರದೀಪಿಕಾರರು ಧರ್ಮಪದವನ್ನು ವ್ಯಾಖ್ಯಾನ ಮಾಡುತ್ತಾ ಧರತೀತಿ ಧರಃ ವಿಷ್ಣುಃ ಸರ್ವಾಧಾರಕತ್ವಾತ್ ಸ ಮೀಯತೇ ಜ್ಞಾಯತೇ ಯೈಃ ತೇ ಧರ್ಮಾಃ ಸದಾಚಾರಾಃ ಎಂಬ ವಿಶೇಷ ಅರ್ಥವನ್ನು ತಿಳಿಸುತ್ತಾರೆ.

★ 19ನೇ ಶ್ಲೋಕ–ಈ ಶ್ಲೋಕದಲ್ಲಿ ವ್ಯಗ್ರಬುದ್ಧ್ಯಾ ಎಂಬ ಪದವಿದೆ. ಆಲೋಚನ ಮಾತ್ರದಿಂದ ಭಗವದಿತರಸರ್ವವಸ್ತುಗಳ ಜ್ಞಾನವುಳ್ಳ ಹನುಮಂತ ದೇವರಂತಹ ಋಜುಯೋಗಿಗಳ ಬುದ್ಧಿಯ ವ್ಯಗ್ರತೆಯನ್ನು ಹೇಗೆ ತಿಳಿಯುವದು ಎನ್ನುವ ಜಿಜ್ಞಾಸೆಗೆ ಭಾವಪ್ರದೀಪಿಕಾಕಾರರು ಮೂರು ರೀತಿಯ ಗತಿಗಳನ್ನು ತಿಳಿಸಿದ್ದಾರೆ.

1. ವ್ಯಗ್ರಾ–ಅನ್ಯತ್ರಾಸಕ್ತಾ ಶ್ರೀರಾಮಗುಣಗಣಾಲೋಚನವ್ಯಾಸಂಗವತೀ ಬುದ್ಧಿಃ ವ್ಯಗ್ರಬುದ್ಧಿಃ ತಯಾ

ಬೇರೆ ಕಡೆಗೆ ಆಸಕ್ತವಾಗದ ಕೇವಲ ಶ್ರೀರಾಮಚಂದ್ರನ ಗುಣಗಣಗಳ ಆಲೋಚನೆ–ಯಲ್ಲಿ ಆಸಕ್ತವಾದ ಬುದ್ಧಿಯನ್ನು ವ್ಯಗ್ರಬುದ್ಧಿ ಎಂದು ಕರೆಯಲಾಗಿದೆ.

2. ವ್ಯಗ್ರಾ–ವಿವಿಧಂ ವಿಶಿಷ್ಟಂ ವಾ ಅಗ್ರಂ ವಿಷಯೀಕರಣಂ ಯಸ್ಯಾಃ ಸಾ ವ್ಯಗ್ರಾ ವ್ಯಗ್ರಾ ಚ ಸಾ ಬುದ್ಧಿಶ್ಚ ವ್ಯಗ್ರಬುದ್ಧಿಃ ತಯಾ

ಅಂದರೆ ನಾನಾವಿಧ ಅಥವಾ ವಿಶಿಷ್ಟವಾದ ವಿಷಯಗಳನ್ನು ವಿಷಯೀಕರಿಸುವ ಬುದ್ಧಿ ಅದು ವ್ಯಗ್ರಬುದ್ಧಿ ಅಂತಹ ಬುದ್ಧಿ ವಾಯುದೇವರಿಗೆ ಇದೆ ಎಂದು ಹೇಳಲಾಗಿದೆ.

3. ವಿ ಪಕ್ಷಿಪರಮಾತ್ಮನೋಃ ಎಂದು ಹೇಳಿದಂತೆ ವೌ ಪರಮಾತ್ಮನಿ ಶ್ರೀರಾಮೇ ಏವ ಅಗ್ರಾ ವಿಷಯೀಕರಣಂ ಯಸ್ಯಾಃ ಸಾ ವ್ಯಗ್ರಾ ಶ್ರೀರಾಮಚರಣನಲಿನಾಸಕ್ತಾ ಚ ಸಾ ಬುದ್ಧಿಶ್ಚ

ವಿ ಎಂದರೆ ಪರಮಾತ್ಮ ಎಂದು ಅರ್ಥ. ಪರಮಾತ್ಮನಲ್ಲಿಯೇ ಆಸಕ್ತವಾದ ಬುದ್ಧಿಯಿಂದ ಎಂಬ ಅರ್ಥವನ್ನೂ ತಿಳಿಯಬಹುದಾಗಿದೆ ಎನ್ನುತ್ತಾರೆ.

ಇದೇ 19ನೇ ಶ್ಲೋಕದಲ್ಲಿ ಕಪಿವರವಪುಷ ಎನ್ನುವದಕ್ಕೆ ಭಾವಪ್ರದೀಪಿಕಾಕಾರರು ಬಹಳ ಸುಂದರವಾದ ಅರ್ಥವನ್ನು ವಾಯುಪರವಾಗಿ ಮಾಡಿದ್ದಾರೆ. ಕಂ ಪರಂ ಬ್ರಹ್ಮ

ಪಿಬಂತಿ ಇತಿ ಕಪಯಃ ರುದ್ರಾದಿದೇವತೆಗಳು. ರುದ್ರಾದಿದೇವತೆಗಳು ಪರಮಾತ್ಮನನ್ನು ಪಾನ ಮಾಡುವದು ಎಂದರೆ ತಮ್ಮ ಕಣ್ಣಿನಿಂದ ಭಕ್ತಿಯಿಂದ ಭಗವಂತನನ್ನು ನೋಡು-ವವರು ಎಂದು ಅರ್ಥ. ಅವರ ಮಧ್ಯದಲ್ಲಿ ಶ್ರೇಷ್ಠವಾದ ಶರೀರ ಉಳ್ಳವರು ಯಾರೋ ಅವರು ಕಪಿವರವಪುಷರು. ಅವರೇ ನಮ್ಮ ಗುರುಗಳಾದ ವಾಯುದೇವರು ಎನ್ನುತ್ತಾರೆ.

★ 25ನೇ ಶ್ಲೋಕ– ಈ ಶ್ಲೋಕದಲ್ಲಿ ಆಮಂಗಲ ಶಬ್ದಕ್ಕೆ ಭಾವದೀಪಿಕಾಕಾರರು ಒಂದು ವಿಶೇಷ ಅರ್ಥವನ್ನು ತೋರಿಸಿದ್ದಾರೆ. ಸಾಮಾನ್ಯವಾಗಿ ಅಮಂಗಲ ಶಬ್ದವು ಜನನ ಮರಣಾದಿ ಅನರ್ಥವನ್ನು ಹೇಳುವಂತಹದ್ದು ಎಂಬುದು ಲೋಕಪ್ರಸಿದ್ಧ-ವಾದರೂ ಮಂಗಲಂ ಭಗವಾನ್ ವಿಷ್ಣು ಎಂದು ಹೇಳಿದಂತೆ ಮಂಗಲ ಎಂದರೆ ಭಗವಂತ ಅವನಿಗೆ ವಿರುದ್ಧವಾದದ್ದು ಅಮಂಗಲ. ಅಂದರೆ ಭಗವದ್ವಿರೋಧಿ ಎಂದು ಅರ್ಥ ಎನ್ನುತ್ತಾರೆ ವ್ಯಾಖ್ಯಾನಕಾರರು.

★ 26ನೇ ಶ್ಲೋಕ– 'ನಿರ್ಭೇದಾಭ್ಯಾಂ ಕೃಷ್ಣನಾಮಾಸ್ಪದಾಭ್ಯಾಂ ಬ್ರಹ್ಮಭ್ಯಾಂ ತುಭ್ಯಂ ಚ ನಮಃ' ಎಂದಿದೆ. ಪರಬ್ರಹ್ಮಸ್ವರೂಪರಾದ ಅತ್ಯಂತ ಅಭಿನ್ನರಾದ ವಾಸಿಷ್ಠ ಯಾದವ ಕೃಷ್ಣ ಎಂದು ಪ್ರಸಿದ್ಧರಾದವರಿಗೆ ಹಾಗೂ ನಿಮಗೂ (ಶ್ರೀಮದಾಚಾರ್ಯ-ರಿಗೂ) ನಮಸ್ಕಾರವು ಎಂದು ಹೇಳಲಾಗಿದೆ.

ಇಲ್ಲಿ ಭಾವಪ್ರದೀಪಿಕಾಕಾರರು ಹೀಗೆ ಶಂಕೆ ಮಾಡಿಕೊಳ್ಳುತ್ತಾರೆ. ವಾಸಿಷ್ಟ ಯಾದವ ಕೃಷ್ಣರು ಅಭಿನ್ನರು ಎಂದು ಹೇಳಿ ಮತ್ತೆ ದ್ವಿವಚನಪ್ರಯೋಗ ಮಾಡಿದ್ದೇಕೆ? ಅದಕ್ಕೆ ವಿಶೇಷಾತ್ ದ್ವಿವಚನವಿಷಯಾಭ್ಯಾಮ್ ಎಂಬುದರಿಂದ ಉತ್ತರ ತಿಳಯಬೇಕು ಎಂದು ಮೂಲದಿಂದಲೇ ಸಮಾಧಾನವನ್ನೂ ಹೇಳಿದ್ದಾರೆ. ಹಾಗಾದರೆ ವಿಶೇಷ ಎಂದರೆ ಏನು ಏನ್ನುವ ಮತ್ತೊಂದು ಆಕ್ಷೇಪಕ್ಕೆ ಹೀಗೆ ಉತ್ತರವನ್ನು ನೀಡುತ್ತಾರೆ. ವಿಶಿಷ್ಯತೇ ವ್ಯಾವರ್ತ್ಯತೇ ಇತಿ ವಿಶೇಷಃ ವ್ಯಾವೃತ್ತಿಃ ವ್ಯವಹಾರೋ ವಾ ಜನ್ಯತೇ ಅನೇನ ಇತಿ ವಿಶೇಷಃ ಅಘಟಿತಘಟನಾಪಟೀಯಸೀ ಅಚಿಂತ್ಯಾ ಈಶ್ವರಶಕ್ತಿಃ ಭೇದಹೀನೇಽಪಿ ವಸ್ತುನಿ ಏಕತರ-ಪರಿಶೇಷಾಭಾವಾದಿನಿರ್ವಾಹಕೋ ಧರ್ಮೋ ವಾ ವಿಶೇಷಃ ।

ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ
ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ (ಅನು.1.1.109)

ಭೇದ ಇಲ್ಲದೇ ಇರುವ ಸ್ಥಳದಲ್ಲಿ ಭೇದದ ವ್ಯವಹಾರವನ್ನು ಮಾಡುವ ಪ್ರಸಂಗಗಳು ಇದ್ದಲ್ಲಿ ವಿಶೇಷ ಒಪ್ಪಿ ಆ ಭೇದವ್ಯವಹಾರವನ್ನು ಮಾಡಲು ಅನುಮಾಡಿಕೊಡುವುದೇ ವಿಶೇಷ. ಅಂತಹ ವಿಶೇಷವನ್ನು ಒಪ್ಪಿ ಈ ಶ್ಲೋಕದಲ್ಲಿ ಭೇದವ್ಯವಹಾರವನ್ನು ಮಾಡಲಾಗಿದೆ. ಹಾಗಂದ ಮಾತ್ರಕ್ಕೆ ವಾಶಿಷ್ಟ ಯಾದವ ಕೃಷ್ಣರಲ್ಲಿ ಭೇದ ಇದೆ ಎಂದು ತಿಳಿಯುವದಲ್ಲ.

★★★

# ಪರಿಶಿಷ್ಟ-3

## ವಾಯುಸ್ತುತಿ ಪುರಶ್ಚರಣ ಕುರಿತಾದ ಕೆಲವು ಮಾತುಗಳು

ತ್ರಿವಿಕ್ರಮಪಂಡಿತಾಚಾರ್ಯರು ಆಚಾರ್ಯರನ್ನು ಪ್ರತ್ಯಕ್ಷ ನೋಡಿದವರು. ಆ ಪೂಜ್ಯರನ್ನು ನಲವತ್ತೊಂದು ಶ್ಲೋಕಗಳಿಂದ ಸ್ತುತಿಸಿದರು. ಅದುವೇ ವಾಯುಸ್ತುತಿ. ಈ ಸ್ತುತಿಗೆ ಆಚಾರ್ಯರು ನರಸಿಂಹನ ನಖಸ್ತುತಿಯನ್ನು ಮಂಗಳಪದ್ಯವಾಗಿ ನೀಡಿದರು. ಸಂಪುಟಾಕಾರಗೊಳಿಸಿ ವಾಯುಸ್ತುತಿಯನ್ನು ಅನೇಕ ಬಾರಿ ಪಠಿಸುವದೇ ಪುರಶ್ಚರಣ. ಈ ಪುರಶ್ಚರಣವನ್ನು ಮಾಡುವವರು ಅನೇಕ ನಿಯಮಗಳನ್ನು ಪರಿಪಾಲಿಸುವ ಪದ್ಧತಿ ನಮ್ಮಲ್ಲಿ ಇಂದಿಗೂ ಇದೆ. ನಿಯಮಗಳಿಗೆ ಆಧಾರವಾಗಿರುವ ಪುರಶ್ಚರಣಕ್ಕೆ ಸಂಬಂಧಿಸಿದ ಕೆಲವು ಪ್ರಮಾಣವಚನಗಳನ್ನು ಇಲ್ಲಿ ಕೊಡಲಾಗಿದೆ.

ಯತ್ಪಾದಾಬ್ಜಪ್ರಸಾದೇನ ವಿನಾ ಬ್ರಹ್ಮಾದಯೋಽಖಿಲಾಃ ।
ನ ಕಿಂಚಿದಪಿ ಜಾನಂತಿ ತಂ ವಂದೇ ಹಯಶೀರ್ಷಕಮ್ ॥ 1 ॥

ನತ್ವಾ ನೃಸಿಂಹಂ ಕಮಲಾಂ ಬ್ರಹ್ಮವಾಯುಸರಸ್ವತೀಮ್ ।
ಶೇಷಾದ್ಯಖಿಲದೇವಾಂಶ್ಚ ಪೂರ್ಣಪ್ರಜ್ಞಂ ಜಗದ್ಗುರುಮ್ ॥ 2 ॥

ವಕ್ಷ್ಯೇ ಲೋಕಹಿತಾರ್ಥಾಯ ಮಂತ್ರಸಾಧನಮುತ್ತಮಮ್ ।
ಧರ್ಮಾರ್ಥಕಾಮಮೋಕ್ಷಾರ್ಥಕಾರಣಂ ಭವತಾರಣಮ್ ॥ 3 ॥

ಯಾವನ ಪ್ರಸಾದವಿಲ್ಲದೇ ಬ್ರಹ್ಮಾದಿದೇವತೆಗಳೂ ಯಾವುದನ್ನು ತಿಳಿಯಲು ಸಾಧ್ಯವಿಲ್ಲವೋ ಅಂತಹ ಹಯಗ್ರೀವನನ್ನು, ನರಸಿಂಹನನ್ನು, ಲಕ್ಷ್ಮೀ,ಬ್ರಹ್ಮ,ವಾಯು, ಸರಸ್ವತೀ, ಶೇಷಾದಿಸಮಸ್ತದೇವತೆಗಳನ್ನು ನಮಸ್ಕರಿಸಿ ಜಗತ್ತಿಗೆ ಗುರುಗಳಾದ ಶ್ರೀಮನ್ಮಧ್ವಾಚಾರ್ಯರನ್ನು ಭಕ್ತಿಯಿಂದ ವಂದಿಸಿ, ಲೋಕಹಿತಕ್ಕಾಗಿ ಧರ್ಮಾರ್ಥ ಕಾಮ-ಮೋಕ್ಷಕ್ಕೆ ಕಾರಣವಾದ, ಸಂಸಾರತಾರಕವಾದ ಉತ್ತಮವಾದ ಸಾಧನವನ್ನು ಹೇಳುತ್ತೇವೆ.

ಪುರಶ್ಚರಣಂ ಸಕೃನ್ಮಂತ್ರಸಿದ್ಧಿರೇವ ನ ಸಂಶಯಃ

ಒಮ್ಮೆ ಮಾಡುವ ಪುರಶ್ಚರಣವು ವಿಶೇಷ ಮಂತ್ರಸಿದ್ಧಿಯನ್ನು ತಂದು ಕೊಡುತ್ತದೆ ಎನ್ನುವದರಲ್ಲಿ ಯಾವ ಸಂಶಯವೂ ಬೇಡ ಎನ್ನುತ್ತಾರೆ. ಒಂದು ಬಾರಿ ಮಾಡಿದ ಪುರಶ್ಚರಣವು ಇಂತಹ ಅತ್ಯುತ್ತಮಫಲವನ್ನು ಕೊಡುವದಾದರೆ ಆ ಪುರಶ್ಚರಣ ಹೇಗೆ ಮಾಡಬೇಕು ಎಂಬುದನ್ನು ಇಲ್ಲಿ ಹೇಳುತ್ತಿದ್ದಾರೆ.

ನಾನಾವಿಧಾಶ್ಚ ಮಂತ್ರಾಶ್ಚ ಸಂತಿ ಹ್ಯೇವ ಸಹಸ್ರಶಃ
ವೈದಿಕಾ ಲೌಕಿಕಾಶ್ಚಾಪಿ ನ ಸಿಧ್ಯಂತಿ ಕಲೌ ಯುಗೇ

ತಸ್ಮಾದಿದಂ ಪರಂ ಗುಪ್ತಂ ವಾಯುಸ್ತೋತ್ರಂ ಮಹಾಫಲಂ
ಸ್ಮರಣಾದ್ದೇವದೇವಸ್ಯ ಈಪ್ಸಿತಾರ್ಥಂ ಕಲೌ ಯುಗೇ

ಆಧ್ಯಾತ್ಮಿಕಪ್ರಪಂಚದಲ್ಲಿ ಲೌಕಿಕ-ವೈದಿಕವಾದ ಮಂತ್ರಗಳು ಅನೇಕಾನೇಕ. ಆದರೆ ವಾಯುದೇವರ ಸ್ಮರಣೆ ಮಾತ್ರದಿಂದ ಅತ್ಯಂತ ಗೌಪ್ಯವಾದ ವಾಯುಸ್ತುತಿ ಮಾತ್ರ ಮಂತ್ರಗಳು ಅನೇಕ ಇದ್ದರೂ ಫಲ ಸಿಗದೇ ವಂಚಿತರಾಗಿರುವುದೇ ಹೆಚ್ಚು. ವಿಶಿಷ್ಟಫಲ-ವನ್ನು ಕೊಡುವದರ ಜೊತೆಗೆ ಅಪೇಕ್ಷಿತವಾದ ಇಷ್ಟಾರ್ಥಗಳನ್ನು ಕೈಗೂಡಿಸಿ ಕೊಡುತ್ತದೆ.

ಬ್ರಾಹ್ಮಣೋ ವಿಷ್ಣುಭಕ್ತಃ ಸನ್ ಗುರುಭಕ್ತ್ಯಾ ಚ ಸಿದ್ಧ್ಯತಿ
ವಿಷ್ಣುಭಕ್ತಿವಿಹೀನಾಯ ನ ಸಿದ್ಧ್ಯತಿ ಕದಾಚನ
ವಿಪರೀತಫಲಾವಾಪ್ತಿಃ ರಾಹೋರಪ್ಯಮೃತಂ ಯಥಾ
ತಸ್ಮಾತ್ ಸರ್ವೇಷು ಕಾರ್ಯೇಷು ವಿಷ್ಣುಭಕ್ತಿವಿಧಿಃ ಸ್ಮೃತಃ

ಬ್ರಾಹ್ಮಣನಾದವನು ವಿಷ್ಣುಭಕ್ತ, ಗುರುಭಕ್ತನಾಗಿರಬೇಕು. ಆಗ ಮಾತ್ರ ಮಂತ್ರ ಪಠಣದ ಫಲ ಸಿಗುತ್ತದೆ. ವಿಪರೀತವಾದರೆ ವಿಪರೀತ ಫಲ ಆಗುವದರಲ್ಲಿ ಸಂಶಯ-ವಿಲ್ಲ. ಆದ್ದರಿಂದ ವಿಹಿತಕರ್ಮಗಳಲ್ಲಿ ವಿಷ್ಣುಭಕ್ತಿ ಇದು ಇರಲೇಬೇಕು.

ಶ್ರೀಬೀಜಮಪಿ ನಿಕ್ಷಿಪ್ಯ ಜಪೇನ್ಮಂತ್ರಂ ವಿಶುದ್ಧಯೇ
ಗೋಷ್ಠೇ ವೃಂದಾವನೇಽಶ್ವತ್ಥೇ ಉದ್ಯಾನೇ ದೇವತಾಲಯೇ
ಪುಣ್ಯಕ್ಷೇತ್ರೇ ಗುರೋರ್ಗೇಹೇ ಚಿತ್ತೈಕಾಗ್ರಸ್ಥಲೇ ಥವಾ
ಪುರಶ್ಚರಣಕೃನ್ಮಂತ್ರಾಃ ಸಿದ್ಧ್ಯಂತ್ಯೇವ ನ ಸಂಶಯಃ

ಶ್ರೀಬೀಜಾಕ್ಷರದೊಂದಿಗೆ ಮಂತ್ರವನ್ನು ಆರಂಭಿಸಬೇಕು. ಗೋಷ್ಠ, ವೃಂದಾವನ, ಅಶ್ವತ್ಥವೃಕ್ಷ, ದೇವೋದ್ಯಾನ, ದೇವಾಲಯ, ಮೊದಲಾದ ಸ್ಥಳಗಳು ಪುರಶ್ಚರಣೆಗೆ ವಿಹಿತಸ್ಥಳಗಳು.

ಗೃಹೇ ತ್ವೇಕಗುಣಂ ಜಾಪ್ಯಂ ನದ್ಯಾದೌ ದ್ವಿಗುಣಂ ಸ್ಮೃತಮ್ ।
ಗವಾಂ ಗೋಷ್ಠೇ ದಶಗುಣಮಗ್ನ್ಯಾಗಾರೇ ಶತಾಧಿಕಮ್ ॥
ಪರ್ವತಾಗ್ರೇ ಚ ತ್ರಿಶತಂ ನದೀತೀರೇ ಚತುಶ್ಶತಮ್ ।
ಬಿಲ್ವಮೂಲೇ ಚಾಷ್ಟಶತಮುದ್ಯಾನೇ ಚ ಸಹಸ್ರಶಃ ॥
ಅಶ್ವತ್ಥಮೂಲೇಽನಂತಗುಣಮಿತಿ ಸ್ಥಾನಂ ಸ್ಮೃತಂ ಬುಧೈಃ ।

ಮನೆಯಲ್ಲಿ ನಡೆಸುವ ಪುರಶ್ಚರಣವು ಒಂದು ಪುಣ್ಯವನ್ನು ತಂದುಕೊಟ್ಟರೆ ನದೀತೀರ ಮೊದಲಾದವುಗಳಲ್ಲಿ ಅದರ ಎರಡು ಪಟ್ಟು, ಆಕಳು ಗೋಷ್ಠದಲ್ಲಿ ಹತ್ತುಪಟ್ಟು, ಅಗ್ನಿಯಲ್ಲಿ (ಆಹುತಿಹಾಕುವ ಮೂಲಕ) ನೂರುಪಟ್ಟು, ಪರ್ವತದಲ್ಲಿ ಮೂರು ನೂರು, ನದೀತೀರದಲ್ಲಿ ನಾಲ್ಕುನೂರು, ಬಿಲ್ವಮೂಲದಲ್ಲಿ ಎಂಟುನೂರು, ಉದ್ಯಾನವನದಲ್ಲಿ ಸಾವಿರಪಟ್ಟು ಅಶ್ವತ್ಥಮೂಲದಲ್ಲಿ ಅನಂತಪುಣ್ಯವನ್ನು ತಂದುಕೊಡುತ್ತದೆ.

ಇನ್ನು ಅನುಷ್ಠಾನಕಾಲದಲ್ಲಿ ಆಸನಗಳು ಹೇಗಿರಬೇಕು ಎಂದು ಹೇಳುತ್ತಾರೆ.

ಧರಣ್ಯಾಂ ದುಃಖಸಂಬಂಧೀ ಅಭಾಗ್ಯಂ ದಾರುಕಾಸನಮ್ ।
ತೃಣಾಸನೇ ಯಶೋಹಾನಿಶ್ಚಿತ್ತಭ್ರಂಶಸ್ತು ಕಾರ್ಪಾಸೇ ॥

ಭೂಮಿಯ ಮೇಲೆ ಕುಳಿತು ಮಾಡುವ ಪುರಶ್ಚರಣವು ದುಃಖವನ್ನು, ದಾರುಕಾಸನವು (ಕೇವಲ ಕಟ್ಟಿಗೆಯ ಆಸನ ಅಂದರೆ ಮಣಿ) ದೌರ್ಭಾಗ್ಯವನ್ನು, ಹುಲ್ಲಿನ ಆಸನವು ಕೀರ್ತಿನಾಶವನ್ನು, ರೇಷ್ಮೆ ವಸ್ತ್ರದ ಆಸನವು ಬುದ್ಧಿಭ್ರಮಣೆಯನ್ನುಂಟು ಮಾಡುತ್ತದೆ.

ವಸ್ತ್ರಾಸನೇ ವ್ಯಾಧಿನಾಶಃ ಕಂಬಲೇ ದುಃಖಮೋಚನಮ್ ।
ಕೃಷ್ಣಾಜಿನೇ ಜ್ಞಾನಸಿದ್ಧಿಃ ಮೋಕ್ಷಶ್ರೀರ್ವ್ಯಾಘ್ರಚರ್ಮಣಿ ॥

ಕಾರ್ಪಾಸದಿಂದ ನಿರ್ಮಿತವಾದ ಆಸನವು ವ್ಯಾಧಿನಾಶವನ್ನು, ಕಂಬಳಾಸನವು ದುಃಖಮೋಚನೆಯನ್ನು ಮಾಡುತ್ತದೆ. ಕೃಷ್ಣಾಜಿನದ ಆಸನವು ಜ್ಞಾನಸಿದ್ಧಿಯನ್ನು ಹುಲಿಚರ್ಮದ ಆಸನವು ಮೋಕ್ಷವನ್ನು ನೀಡುತ್ತದೆ.

ಪೂರ್ವೇ ಚ ವ್ಯಾಧಿನಾಶಾಯ ಆಗ್ನೇಯ್ಯಾಂ ಬಂಧಮೋಚನಮ್
ದಕ್ಷಿಣೇ ಧನಮಾಯುಷ್ಯಂ ನೈರ್ಋತೇ ದುಃಖನಾಶನಮ್ ।
ಪಶ್ಚಿಮೇ ಶತ್ರುನಾಶಾಯ ವಾಯವ್ಯಾಂ ಮರಣಂ ಧ್ರುವಮ್
ಕುಬೇರೇ ಪುತ್ರಲಾಭಂ ಚ ಈಶಾನ್ಯೇ ಸರ್ವಕಾಮದಮ್ ॥

ಪೂರ್ವದಿಕ್ಕಿನಲ್ಲಿ ಮಾಡುವದು ವ್ಯಾಧಿನಾಶಕ. ಆಗ್ನೇಯದಿಕ್ಕು ಬಂಧಮೋಚಕ, ದಕ್ಷಿಣದಿಕ್ಕು ಐಶ್ವರ್ಯವೃದ್ಧಿ, ಹಾಗೂ ಆಯುಷ್ಯವೃದ್ಧಿ, ನೈಋತ್ಯ ದುಃಖಪರಿಹಾರ. ಪಶ್ಚಿಮದಲ್ಲಿ ಶತ್ರುನಾಶ. ವಾಯವ್ಯದಲ್ಲಿ ಮರಣಪ್ರಾಪ್ತಿ. ಉತ್ತರದಲ್ಲಿ ಪುತ್ರದಾಯಕ, ಈಶಾನ್ಯದಲ್ಲಿ ಸರ್ವಸಿದ್ಧಿಪ್ರದಾಯಕ.

ಇನ್ನು ಯಾವ ನಕ್ಷತ್ರಗಳು ಶ್ರೇಷ್ಠ ಎಂದು ತಿಳಿಯುವದಾದರೆ
ಅಶ್ವಿನೀ ರೋಹಿಣೀ ಮೈತ್ರೀ ಪಿತೃಪುಷ್ಯೇ ತಥಾದಿತಿ
ಶ್ರವಣೇ ರೇವತೀ ಸ್ವಾತೀ ನ ಚ ಋಕ್ಷೇ ಶುಭಪ್ರದಾ ।

ಅಶ್ವಿನಿ, ರೋಹಿಣಿ, ಶ್ರವಣ, ಸ್ವಾತಿ, ನಕ್ಷತ್ರಗಳು ಶುಭ.

ಶ್ರಾವಣೇ ಕಾರ್ತಿಕೇ ಮಾರ್ಗೇ ಮಧು ವೈಶಾಖಮಾಸಕೇ
ಪುಷ್ಯ ಆಷಾಢಯೋರ್ಮೌಢ್ಯೇ ಗುರುಶುಕ್ರೋರ್ನ ಕಾರಯೇತ್
ಏತೇಷು ಶುಭಮಾಸೇಷು ಸರ್ವಕಾಮಫಲಪ್ರದಮ್ ।

ಮಾಸಗಳಲ್ಲಿ ಶ್ರಾವಣ ಕಾರ್ತಿಕ ಮಾರ್ಗಶಿರ,ವೈಶಾಖ,ಪುಷ್ಯ, ಆಷಾಢಮಾಸದ ಶುಕ್ಲಪಕ್ಷ ಪುರಶ್ಚರಣೆಗೆ ಶ್ರೇಷ್ಠ.

ಪ್ರಾತಃಕಾಲೇ ಸರ್ವಸಿದ್ಧಿಃ ಸಂಗವೇ ಮಿತ್ರಸಂಪದಃ ।
ಶತ್ರೋಚ್ಚಾಟನಮಧ್ಯಾಹ್ನೇಽಪರಾಹ್ಣೇಪರಾಹ್ಣೇ ಬಂಧಮೋಚನಮ್
ಸಾಯಾಹ್ನೇ ಮರಣಂ ಪ್ರಾಹುಃ ಪುರಶ್ಚರಣಲಕ್ಷಣಮ್

ಪ್ರಾತಃಕಾಲದಲ್ಲಿ ಸರ್ವಸಿದ್ಧಿ, ಸಂಗವಕಾಲದಲ್ಲಿ ಮಿತ್ರಪ್ರಾಪ್ತಿ, ಮಧ್ಯಾಹ್ನದಲ್ಲಿ ಶತ್ರುನಾಶ, ಅಪರಾಹ್ಣದಲ್ಲಿ ಬಂಧನ, ಸಾಯಂಕಾಲದಲ್ಲಿ ಮರಣ, ಆದ್ದರಿಂದ ಮಧ್ಯಾಹ್ನದ ಮುನ್ನವೇ ಪೂರೈಸುವದು ವಿಹಿತ.

ಭೂಯೋ ದ್ರವ್ಯಮಿದಂ ವಕ್ಷ್ಯೇ ಪೂರ್ಣಮಿಷ್ಟಾರ್ಥಸಿದ್ಧಿದಮ್ ।
ಲಕ್ಷ್ಮೀಕಾಮಸ್ತು ಮಂತ್ರಜ್ಞಃ ಸೇವಂತೀಕುಸುಮೈರ್ಯಜೇತ್ ॥ 23 ॥

ಅಯುತೇ ನಿಯುತೇ ವರ್ಷೇ ದಾರಿದ್ರ್ಯಂ ನ ಭವೇತ್ ಕುಲೇ ।
ಔದುಂಬರಸಮಿದ್ಭಿಶ್ಚ ಧನಸಿದ್ಧಿರ್ಭವಿಷ್ಯತಿ ॥ 24 ॥

ಸಂಪತ್ತು ಬೇಕು ಎಂದು ಬಯಸುವ ಮಂತ್ರಜ್ಞನು ಸೇವಂತಿಕಾಪುಷ್ಪಗಳಿಂದ ಮುಖ್ಯಪ್ರಾಣದೇವರನ್ನು ಪೂಜಿಸಬೇಕು. ಅವನ ಕುಲದಲ್ಲಿ ಹುಟ್ಟಿದವರಿಗೆ ದ್ರಾರಿದ್ರ್ಯವು ಬರುವದಿಲ್ಲ. ಔದುಂಬರಸಮಿತ್ತುಗಳನ್ನು ಕೈಯಲ್ಲಿ ಹಿಡಿದುಕೊಂಡು ಧ್ಯಾನಮಾಡು-ವವರು ಧನದ ಮಹಾಸಿದ್ಧಿಯನ್ನೇ ಹೊಂದುತ್ತಾರೆ.

ಕಮಲಪುಷ್ಪೇನ ಹೋಮೇನ ಧನದೇನ ಸಮೋ ಭವೇತ್ ।
(ಕುಂದಪುಷ್ಪಸುಹೋಮೇನ ಮಹೋದಯಮವಾಪ್ಸ್ಯಸಿ )
ಶತಪತ್ರೈಶ್ಚ ಹೋಮೇನ ಮಹೋದಯಮವಾಪ್ಸ್ಯತಿ ॥ 25 ॥

ಮಧೂಕಪುಷ್ಪಹೋಮೇನ ಇಷ್ಟಸಿದ್ಧಿರ್ಭವಿಷ್ಯತಿ ।
ತುಲಸೀಪತ್ರಹೋಮೇನ ಕೀರ್ತಿಂ ಯಾತಿ ನ ಸಂಶಯಃ ॥ 26 ॥

ಕಮಲಪುಷ್ಪಗಳಿಂದ ಹೋಮಮಾಡುವವನು ಕುಬೇರನಿಗೆ ಸಮನಾಗುತ್ತಾನೆ. (ಕುಂದಪುಷ್ಪಗಳಿಂದ ಮಾಡಿದ ಹೋಮವು ಮಹೋದಯಕ್ಕೆ ಸಮವೆನಿಸುತ್ತದೆ.) ಶತಪತ್ರಗಳಿಂದ ಹೋಮಮಾಡುವವನು ಮಹೋದಯವನ್ನು ಹೊಂದುತ್ತಾನೆ. ಮಧೂಕಪುಷ್ಪಗಳಿಂದ ಹೋಮಿಸುವವನು ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ತುಳಸೀ-ಪತ್ರಗಳಿಂದ ಹೋಮಿಸುವವನು ವಿಶಿಷ್ಟಕೀರ್ತಿಯನ್ನು ಹೊಂದುತ್ತಾನೆ ಎನ್ನುವದರಲ್ಲಿ ಯಾವ ಸಂಶಯವೂ ಇಲ್ಲ.

### ಅಥ ಜಪಕ್ರಮಂ ವಕ್ಷ್ಯತೇ

ನದ್ಯಾಂ ಸ್ನಾತ್ವಾ ಶುಚೌ ದೇಶೇ ನಿತ್ಯಕರ್ಮ ಸಮಾಚರೇತ್ ।
ಪಶ್ಚಾತ್ಸ್ಥಾನಂ ಸಮಾಗತ್ಯ ವದತೋ ನಿಯತಶ್ಶುಚಿಃ ॥ 29 ॥

ಪ್ರಾಣಾಯಾಮಂ ತತಃ ಕುರ್ಯಾತ್ಸಂಕಲ್ಪಂ ವಿಧಿಪೂರ್ವಕಮ್ ।
ಸ್ತೋತ್ರಾರಂಭಂ ತತಃ ಕುರ್ಯಾತ್ ಶ್ಲೋಕೇನೈವ ಸಸಂಖ್ಯಯಾ ॥

ಏಕವಾರಂ ದ್ವಿವಾರಂ ಚ ತ್ರಿವಾರಂ ಚಾಥ ಸಪ್ತಕಮ್ ।
ಯಃ ಪಠೇನ್ನಿಯತೋ ಭಕ್ತ್ಯಾ ಈಪ್ಸಿತಂ ಫಲಮಾಪ್ನುಯಾತ್
ದ್ರವ್ಯಕರ್ಮಾನುಸಾರೇಣ ಹೋತವ್ಯಂ ಚ ಹುತಾಶನೇ
ಅಷ್ಟಾವಿಂಶತಿರಾಹುತ್ಯಾ ಶ್ಲೋಕೇನೈಕೇನ ನಿತ್ಯಶಃ ।
ಸಪ್ತರಾತ್ರಂ ದ್ವಿಸಪ್ತಂ ಚ ತ್ರಿಸಪ್ತಮಥ ಮಂಡಲಮ್ ।
ಕುರ್ಯಾಜ್ಜಪಂ ಚ ಹೋಮಂ ಚ ಸರ್ವಕಾರ್ಯಾರ್ಥಸಿದ್ಧಯೇ
ಪೂಜಯೇಚ್ಚ ನೃಸಿಂಹಂ ಚ ಪಶ್ಚಾದ್ಬ್ರಾಹ್ಮಣಭೋಜನಮ್
ಕುರ್ಯಾದ್ವೈಭವಸಾರೇಣ ವಿತ್ತಶಾಠ್ಯಂ ನ ಕಾರಯೇತ್ ॥ 34 ॥

ಇನ್ನು ಜಪದ ಕ್ರಮವನ್ನು ತಿಳಿಸುತ್ತಾರೆ. ನದಿಯಲ್ಲಿ ಸ್ನಾನವನ್ನು ಮಾಡಿ ಶುದ್ಧವಾದ ದೇಶದಲ್ಲಿ ನಿತ್ಯಕರ್ಮಗಳನ್ನು ಮುಗಿಸಿ ನಂತರ ವಾಯುದೇವರ ಆರಾಧನೆಗಾಗಿ ಸಿದ್ಧಪಡಿಸಲಾದ ಸ್ಥಳಕ್ಕೆ ಬರಬೇಕು. ಆಚಮನ ಪ್ರಾಣಾಯಾಮಗಳನ್ನು ಮಾಡಿ ವಿಧಿ ಪೂರ್ವಕ ಸಂಕಲ್ಪವನ್ನೂ ಪೂರೈಸಿ ವಿಹಿತ ದ್ರವ್ಯಗಳಿಂದ ಅಗ್ನಿಯಲ್ಲಿ ಹೋಮಿಸಬೇಕು. ಸಪ್ತಾಹ, ಪಕ್ಷ, 3 ಸಪ್ತಾಹ, ಅಥವಾ ಮಂಡಲಕಾಲದ ಪುರಶ್ಚರಣ, ನಂತರ ಹೋಮ ನೃಸಿಂಹದೇವರ ಪೂಜೆ ಬ್ರಾಹ್ಮಣರ ಭೋಜನ ವಿಶೇಷರೀತಿಯ ದಾನಗಳನ್ನು ಮಾಡಬೇಕು. ಹೀಗೆ ಅತ್ಯಂತಶ್ರದ್ಧೆಯಿಂದ ವೈಭವೋಪೇತವಾಗಿ ವಿತ್ತಶಾಠ್ಯವಿಲ್ಲದಂತೆ ವಾಯುಸ್ತುತಿಪುರಶ್ಚರಣವನ್ನು ಮಾಡಬೇಕು.

### ಸಂಕಲ್ಪ

ಆಚಮ್ಯ....., ಪ್ರಾಣಾನಾಯಮ್ಯ – ಅಸ್ಯ ಯಜಮಾನಸ್ಯ ಸಕಲಮನೋಽಭೀಷ್ಟಸಿದ್ಧ್ಯರ್ಥಂ ವಾಯುಸ್ತುತಿ ಪುರಶ್ಚರಣಮಹಂ ಕರಿಷ್ಯೇ ।

ಅಸ್ಯ ಶ್ರೀವಾಯುಸ್ತುತಿಪುರಶ್ಚರಣಮಂತ್ರಸ್ಯ ಬ್ರಹ್ಮಾ ಋಷಿಃ ದೈವೀ ಗಾಯತ್ರೀ ಛಂದಃ । ಶ್ರೀಮುಖ್ಯಪ್ರಾಣಾಂತರ್ಗತಶ್ರೀರಾಮಕೃಷ್ಣವೇದವ್ಯಾಸಾ ದೇವತಾಃ । ತತ್ಪ್ರೀತ್ಯರ್ಥೇ ಜಪೇ ವಿನಿಯೋಗಃ ।

### ವಾಯುಗುರುನಮಸ್ಕಾರಃ

ಓಂ ಹಂ ಹನುಮತೇ ನಮಃ , ಓಂ ಭೀಂ ಭೀಮಾಯ ನಮಃ, ಓಂ ಮಂ ಮಧ್ವಾಯ ನಮಃ, ಓಂ ಪೂಂ ಪೂರ್ಣಪ್ರಜ್ಞಾಯ ನಮಃ, ಓಂ ವಂ ವಾಯುಪುತ್ರಾಯ ನಮಃ, ಓಂ ಅಂ ಅಂಜನೀನಂದನಾಯ ನಮಃ, ಓಂ ಜಂ ಜಿತೇಂದ್ರಿಯಾಯ ನಮಃ, ಓಂ ವಂ ವಾನರಯೂಥಮುಖ್ಯಾಯ ನಮಃ, ಓಂ ರಂ ರಾಮದೂತಾಯ ನಮಃ, ಓಂ ಪಂ ಪವನಾಯ ನಮಃ, ಓಂ ಪ್ರಂ ಪ್ರಾಣದೇವಾಯ ನಮಃ, ಓಂ ಮಂ ಮಹಾದೇವಾಯ ನಮಃ ।

ನಾಭಿಂ ಸ್ಪೃಷ್ಟ್ವಾ, ಓಂ ಹಂ ಹನುಮತೇ ನಮಃ ಓಂ (ಎಂದು ಆರು ಬಾರಿ ಹೇಳಬೇಕು.) ತತಃ ಹೃದಯಂ ಆನೀಯ, ಓಂ ಭೀಂ ಭೀಮಾಯ ನಮಃ ಓಂ (ಎಂದು ಹನ್ನೆರಡು ಬಾರಿ ಹೇಳಬೇಕು.) ಶಿರಸಿ ಆನೀಯ, ಓಂ ಮಂ ಮಧ್ವಾಯ ನಮಃ ಓಂ (ಎಂದು ಇಪ್ಪತ್ತಾಲ್ಕು ಬಾರಿ) ಜಪವನ್ನು ಮಾಡಬೇಕು.

(ಹನುಮತೇ, ಭೀಮಾಯ,ಮಧ್ವಾಯ ನಮಃ ಇತಿ ಮಂತ್ರೇಣ ಪ್ರಾಣಾಯಾಮಂ ಕೃತ್ವಾ) ಹನುಮ-ಭೀಮ-ಮಧ್ವರನ್ನು ಸ್ಮರಣೆ ಮಾಡಿ ಪ್ರಾಣಾಯಾಮವನ್ನು ಮಾಡಬೇಕು.

## ಅಥ ಅಂಗುಲಿನ್ಯಾಸಃ

ಓಂ ಅಂಜನೀನಂದನಾಯ (ಅಂಜನಾಸುತಾಯ) ಅಂಗುಷ್ಠಾಭ್ಯಾಂ ನಮಃ । ಓಂ ರುದ್ರಮೂರ್ತಯೇ ತರ್ಜನೀಭ್ಯಾಂ ನಮಃ । ಓಂ ವಾಯುಸುತಾಯ ಮಧ್ಯಮಾಭ್ಯಾಂ ನಮಃ । ಓಂ ರಾಮದೂತಾಯ ಅನಾಮಿಕಾಭ್ಯಾಂ ನಮಃ । ಓಂ ಅಗ್ನಿಗರ್ಭಾಯ (ಅಗ್ನಿಗರ್ಭ-ಮೂರ್ತಯೇ)ಕನಿಷ್ಠಿಕಾಭ್ಯಾಂ ನಮಃ । ಓಂ ಹಂ ಹನುಮತೇ ಕರತಲಕರಪೃಷ್ಠಾಭ್ಯಾಂ ನಮಃ ।

## ಅಥ ಪಂಚಾಂಗನ್ಯಾಸಃ

ಓಂ ಪ್ರಾಣಾತ್ಮನೇ ಅಂಜನೀನಂದನಾಯ (ಅಂಜನಾಸುತಾಯ)ಹೃದಯಾಯ ನಮಃ । ಓಂ ಅಪಾನಾತ್ಮನೇ (ಸದ್ಗರ್ಭಮೂರ್ತಯೇ) ರುದ್ರಮೂರ್ತಯೇ ಶಿರಸೇ ಸ್ವಾಹಾ । ಓಂ ವ್ಯಾನಾತ್ಮನೇ ವಾಯುಸುತಾಯ ಶಿಖಾಯೈ ವೌಷಟ್ । ಓಂ ಉದಾನಾತ್ಮನೇ ರಾಮದೂತಾಯ ಕವಚಾಯ ಹುಂ । ಓಂ ಸಮಾನಾತ್ಮನೇ ಬ್ರಹ್ಮಾಸ್ತ್ರನಿವಾರಣಾಯ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ॥

ಓಂ ಹಂ ಹನುಮತೇ ಇತಿ ಕೀಲಕಂ । ಓಂ ಭೀಂ ಭೀಮಾಯ ಇತಿ ಬೀಜಂ ॥ ಓಂ ಮಂ ಮಧ್ವಾಯ ಇತಿ ಶಕ್ತಿಃ ॥ ಶ್ರೀರಾಮಕೃಷ್ಣವೇದವ್ಯಾಸಪ್ರೀತ್ಯರ್ಥೇ ಜಪೇ ವಿನಿಯೋಗಃ ॥

## ಧ್ಯಾನಶ್ಲೋಕಾಃ

### ಬಂಧನಮೋಚನಧ್ಯಾನಮ್

ನಮಸ್ತೇ ಮರುತಾಂ ಶ್ರೇಷ್ಠ ಪ್ರಾಣದೇವ ಮಹಾಬಲ ।
ಮೋಚಯಸ್ವ ಮಹಾಬಾಹೋ ಸ್ವವೀರ್ಯಾತ್ ಸುಪ್ರಜಾಃ ಪ್ರಭೋ ॥

ರಾಜಾವನಾಯ ಶನಿಪುಂಗವಪಾರ್ಷದೌ ಚ
ಸಂದಿಶ್ಯ ಕರ್ಣಮಭಿಗಚ್ಛತ ಆಸ ರೂಪಂ ।
ಅಂತೇ ಕೃತಾಂತನರಸಿಂಹತನುರ್ಯಥೈವ
ವಿಷ್ಣೋರ್ಹರಂ ಗ್ರಸತ ಆತ್ತಸಮಸ್ತವಿಶ್ವಮ್ ॥

### ಅಥ ಹನುಮದ್ಧ್ಯಾನಮ್

ಧ್ಯಾಯೇದ್ಬಾಲದಿವಾಕರದ್ಯುತಿನಿಭಂ ದೇವಾರಿದರ್ಪಾಪಹಂ

ದೇವೇಂದ್ರಪ್ರಮುಖಂ ಪ್ರಶಸ್ತಯಶಸಂ ದೇದೀಪ್ಯಮಾನಂ ರುಚಾ ।
ಸುಗ್ರೀವಾದಿಸಮಸ್ತವಾನರಯುತಂ ಸುವ್ಯಕ್ತತತ್ತ್ವಪ್ರಿಯಂ
ಸಂರಕ್ತಾರುಣಲೋಚನಂ ಪವನಜಂ ಪೀತಾಂಬರಾಲಂಕೃತಮ್ ॥

ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ ।
ವಾತಾತ್ಮಜಂ ವಾನರಯೂಥಮುಖ್ಯಂ ಶ್ರೀರಾಮದೂತಂ ಶಿರಸಾ ಪ್ರಪದ್ಯೇ (ನಮಾಮಿ) ॥
ಬುದ್ಧಿರ್ಬಲಂ ಯಶೋಧೈರ್ಯಂ ನಿರ್ಭಯತ್ವಮರೋಗತಾ ।
ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ಸ್ಮರಣಾದ್ಭವೇತ್ ॥
ಸ್ಫಟಿಕಾಭಂ ಸ್ವರ್ಣಕಾಂತಿಂ ದ್ವಿಭುಜಂ ಚ ಕೃತಾಂಜಲಿಮ್ ।
ಕುಂಡಲದ್ವಯಸಂಶೋಭಿ ಮುಖಾಂಭೋಜಂ ಮುಹುರ್ಮುಹುಃ ॥

## ಅಥ ಭೀಮಧ್ಯಾನಮ್

ಆದಿತ್ಯಕೋಟಿಪ್ರತಿಮೋಗ್ರತೇಜಸಂ ಕಿರೀಟಕೇಯೂರಮಹಾವಿಭೂಷಣಮ್ ।
ಧ್ಯಾಯೇದ್ಗದಾಭಯಕರಾಮಿತಬಾಹುವಕ್ತ್ರಂ ಭೀಮಂ ಮಹಾಭಯಹರಂ ಸುರವೈರಿಹಂತಕಮ್ ॥

## ಅಥ ಮಧ್ವಧ್ಯಾನಂ

ನವಾರ್ಕಕಾಂತಿಂ ಸ್ಮಿತಸುಂದರಾಸ್ಯಂ ಸುವರ್ಣಕೌಪೀನಭೃತಾಂ ವರಿಷ್ಠಮ್ ।
ಪ್ರಬೋಧಮುದ್ರಾಭಯಪದ್ಮಹಸ್ತಂ ಪ್ರಣಮ್ಯ ವಿದ್ಯಾಧಿಪತಿಂ ಚ ಮಧ್ವಮ್ ॥
ಬಳಿತ್ಥಾ ತದ್ವಪುಷೇ---।
ಅಶ್ವಮೇಧಃ ಕ್ರತುಃಶ್ರೇಷ್ಠೋ ಜ್ಯೋತಿಶ್ರೇಷ್ಠೋ ದಿವಾಕರಃ ।
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥
ತ್ರಿಕೋಟಿಮೂರ್ತಿಸಂಯುಕ್ತೋ ತ್ರೇತಾಯಾಂ ರಾಕ್ಷಸಾಂತಕಃ ।
ಹನುಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥
ಸ ವಾಯುರ್ಭೀಮಸೇನಸ್ತು ದ್ವಾಪರಾಂತೇ ಕುರೂದ್ವಹ ।
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ॥
ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ ।
ಯತಿರೂಪಧರೋ ವಾಯುರ್ಭವಿಷ್ಯತಿ ನ ಸಂಶಯಃ ॥
ಆನಂದತೀರ್ಥನೃಹರಿಃ ಸ್ವಪದಾನುಸಂಗೀ ಹರ್ಷಾಯ ವಾದಿಗಜಮಸ್ತಕಮರ್ದನಾಯ ।
ಕುರ್ವನ್ನುದಾರಚರಿತಾನಿ ಸಮಸ್ತದೇವವರ್ಯೋದಿತಾನಿ ಸತತಂ ವಿಜಯಾಯ ನೋಽಸ್ತು ॥
ಪಾಪಂ ನಶ್ಯೇತ್ಪಣಂ ನಶ್ಯೇನ್ನಶ್ಯಂತಿ ಮಮ ಶತ್ರವಃ ।
ಆಧಿವ್ಯಾಧೀ ಚ ನಶ್ಯಂತಿ ಮಹಾಭೀತಿನಿವಾರಣಮ್ ॥
ಪ್ರಥಮೋ ಹನುಮಾನ್ನಾಮಾ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥
ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಮ್ ।
ಬಾಷ್ಪವಾರಿಪರಿಪೂರ್ಣಲೋಚನಂ ಮಾರುತಿಂ ಸ್ಮರತ ರಾಕ್ಷಸಾಂತಕಮ್ ॥

ನಾಭಿಂ ಸ್ಪೃಷ್ಟ್ವಾ, ಓಂ ಹಂ ಹನುಮತೇ ನಮಃ ಓಂ (ಎಂದು ಆರು ಬಾರಿ ಹೇಳಬೇಕು.) ತತಃ ಹೃದಯಂ ಆನೀಯ, ಓಂ ಭೀಂ ಭೀಮಾಯ ನಮಃ ಓಂ (ಎಂದು ಹನ್ನೆರಡು ಬಾರಿ ಹೇಳಬೇಕು.) ಶಿರಸಿ ಆನೀಯ, ಓಂ ಮಂ ಮಧ್ವಾಯ ನಮಃ ಓಂ (ಎಂದು ಇಪ್ಪತ್ನಾಲ್ಕು ಬಾರಿ) ಜಪವನ್ನು ಮಾಡಬೇಕು.

(ಹನುಮತೇ, ಭೀಮಾಯ,ಮಧ್ವಾಯ ನಮಃ ಇತಿ ಮಂತ್ರೇಣ ಪ್ರಾಣಾಯಾಮಂ ಕೃತ್ವಾ) ಹನುಮ-ಭೀಮ-ಮಧ್ವರನ್ನು ಸ್ಮರಣೆ ಮಾಡಿ ಪ್ರಾಣಾಯಾಮವನ್ನು ಮಾಡಬೇಕು.

## ಅಥ ಅಂಗುಲಿನ್ಯಾಸಃ

ಓಂ ಅಂಜನೀನಂದನಾಯ (ಅಂಜನಾಸುತಾಯ) ಅಂಗುಷ್ಠಾಭ್ಯಾಂ ನಮಃ । ಓಂ ರುದ್ರಮೂರ್ತಯೇ ತರ್ಜನೀಭ್ಯಾಂ ನಮಃ । ಓಂ ವಾಯುಸುತಾಯ ಮಧ್ಯಮಾಭ್ಯಾಂ ನಮಃ । ಓಂ ರಾಮದೂತಾಯ ಅನಾಮಿಕಾಭ್ಯಾಂ ನಮಃ । ಓಂ ಅಗ್ನಿಗರ್ಭಾಯ (ಅಗ್ನಿಗರ್ಭ-ಮೂರ್ತಯೇ)ಕನಿಷ್ಠಿಕಾಭ್ಯಾಂ ನಮಃ । ಓಂ ಹಂ ಹನುಮತೇ ಕರತಲಕರಪೃಷ್ಠಾಭ್ಯಾಂ ನಮಃ ।

## ಅಥ ಪಂಚಾಂಗನ್ಯಾಸಃ

ಓಂ ಪ್ರಾಣಾತ್ಮನೇ ಅಂಜನೀನಂದನಾಯ (ಅಂಜನಾಸುತಾಯ)ಹೃದಯಾಯ ನಮಃ । ಓಂ ಅಪಾನಾತ್ಮನೇ (ಸದ್ಗರ್ಭಮೂರ್ತಯೇ) ರುದ್ರಮೂರ್ತಯೇ ಶಿರಸೇ ಸ್ವಾಹಾ । ಓಂ ವ್ಯಾನಾತ್ಮನೇ ವಾಯುಸುತಾಯ ಶಿಖಾಯೈ ವೌಷಟ್ । ಓಂ ಉದಾನಾತ್ಮನೇ ರಾಮದೂತಾಯ ಕವಚಾಯ ಹುಂ । ಓಂ ಸಮಾನಾತ್ಮನೇ ಬ್ರಹ್ಮಾಸ್ತ್ರನಿವಾರಣಾಯ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ॥

ಓಂ ಹಂ ಹನುಮತೇ ಇತಿ ಕೀಲಕಂ । ಓಂ ಭೀಂ ಭೀಮಾಯ ಇತಿ ಬೀಜಂ ॥ ಓಂ ಮಂ ಮಧ್ವಾಯ ಇತಿ ಶಕ್ತಿಃ ॥ ಶ್ರೀರಾಮಕೃಷ್ಣವೇದವ್ಯಾಸಪ್ರೀತ್ಯರ್ಥೇ ಜಪೇ ವಿನಿಯೋಗಃ ॥

## ಧ್ಯಾನಶ್ಲೋಕಾಃ

**ಬಂಧನಮೋಚನಧ್ಯಾನಮ್**

ನಮಸ್ತೇ ಮರುತಾಂ ಶ್ರೇಷ್ಠ ಪ್ರಾಣದೇವ ಮಹಾಬಲ ।
ಮೋಚಯಸ್ವ ಮಹಾಬಾಹೋ ಸ್ವವೀರ್ಯಾತ್ ಸುಪ್ರಜಾಃ ಪ್ರಭೋ ॥

ರಾಜಾವನಾಯ ಶನಿಪುಂಗವಪಾರ್ಷದೌ ಚ
ಸಂದಿಶ್ಯ ಕರ್ಣಮಭಿಗಚ್ಛತ ಆಸ ರೂಪಂ ।
ಅಂತೇ ಕೃತಾಂತನರಸಿಂಹತನುರ್ಯಥೈವ
ವಿಷ್ಣೋರ್ಹರಂ ಗ್ರಸತ ಆತ್ತಸಮಸ್ತವಿಶ್ವಮ್ ॥

**ಅಥ ಹನುಮದ್ಧ್ಯಾನಮ್**

ಧ್ಯಾಯೇದ್ಬಾಲದಿವಾಕರದ್ಯುತಿನಿಭಂ ದೇವಾರಿದರ್ಪಾಪಹಂ

ದೇವೇಂದ್ರಪ್ರಮುಖಂ ಪ್ರಶಸ್ತಯಶಸಂ ದೇದೀಪ್ಯಮಾನಂ ರುಚಾ ।
ಸುಗ್ರೀವಾದಿಸಮಸ್ತವಾನರಯುತಂ ಸುವ್ಯಕ್ತತತ್ತ್ವಪ್ರಿಯಂ
ಸಂರಕ್ತಾರುಣಲೋಚನಂ ಪವನಜಂ ಪೀತಾಂಬರಾಲಂಕೃತಮ್ ॥

ಮನೋಜವಂ ಮಾರುತತುಲ್ಯವೇಗಂ ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್ ।
ವಾತಾತ್ಮಜಂ ವಾನರಯೂಥಮುಖ್ಯಂ ಶ್ರೀರಾಮದೂತಂ ಶಿರಸಾ ಪ್ರಪದ್ಯೇ (ನಮಾಮಿ) ॥
ಬುದ್ಧಿರ್ಬಲಂ ಯಶೋಧೈರ್ಯಂ ನಿರ್ಭಯತ್ವಮರೋಗತಾ ।
ಅಜಾಡ್ಯಂ ವಾಕ್ಪಟುತ್ವಂ ಚ ಹನುಮತ್ಸ್ಮರಣಾದ್ಭವೇತ್ ॥
ಸ್ಫಟಿಕಾಭಂ ಸ್ವರ್ಣಕಾಂತಿಂ ದ್ವಿಭುಜಂ ಚ ಕೃತಾಂಜಲಿಮ್ ।
ಕುಂಡಲದ್ವಯಸಂಶೋಭಿ ಮುಖಾಂಭೋಜಂ ಮುಹುರ್ಮುಹುಃ ॥

## ಅಥ ಭೀಮಧ್ಯಾನಮ್

ಆದಿತ್ಯಕೋಟಿಪ್ರತಿಮೋಗ್ರತೇಜಸಂ ಕಿರೀಟಕೇಯೂರಮಹಾವಿಭೂಷಣಮ್ ।
ಧ್ಯಾಯೇದ್ಗದಾಭಯಕರಾಮಿತಬಾಹುವಕ್ತ್ರಂ ಭೀಮಂ ಮಹಾಭಯಹರಂ ಸುರವೈರಿಹಂತಕಮ್ ॥

## ಅಥ ಮಧ್ವಧ್ಯಾನಂ

ನವಾರ್ಕಕಾಂತಿಂ ಸ್ಮಿತಸುಂದರಾಸ್ಯಂ ಸುವರ್ಣಕೌಪೀನಭೃತಾಂ ವರಿಷ್ಠಮ್ ।
ಪ್ರಬೋಧಮುದ್ರಾಭಯಪದ್ಮಹಸ್ತಂ ಪ್ರಣಮ್ಯ ವಿದ್ಯಾಧಿಪತಿಂ ಚ ಮಧ್ವಮ್ ॥
ಬಳಿತ್ಥಾ ತದ್ವಪುಷೇ---।
ಅಶ್ವಮೇಧಃ ಕ್ರತುಃಶ್ರೇಷ್ಠೋ ಜ್ಯೋತಿಶ್ರೇಷ್ಠೋ ದಿವಾಕರಃ ।
ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ ॥
ತ್ರಿಕೋಟಿಮೂರ್ತಿಸಂಯುಕ್ತೋ ತ್ರೇತಾಯಾಂ ರಾಕ್ಷಸಾಂತಕಃ ।
ಹನುಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥
ಸ ವಾಯುರ್ಭೀಮಸೇನಸ್ತು ದ್ವಾಪರಾಂತೇ ಕುರೂದ್ವಹ ।
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ॥
ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ ।
ಯತಿರೂಪಧರೋ ವಾಯುರ್ಭವಿಷ್ಯತಿ ನ ಸಂಶಯಃ ॥
ಆನಂದತೀರ್ಥನೃಹರಿಃ ಸ್ವಪದಾನುಸಂಗೀ ಹರ್ಷಾಯ ವಾದಿಗಜಮಸ್ತಕಮರ್ದನಾಯ ।
ಕುರ್ವನ್ನುದಾರಚರಿತಾನಿ ಸಮಸ್ತದೇವವರ್ಯೋದಿತಾನಿ ಸತತಂ ವಿಜಯಾಯ ನೋಽಸ್ತು ॥
ಪಾಪಂ ನಶ್ಯೇತ್ಪಣಂ ನಶ್ಯೇನ್ನಶ್ಯಂತಿ ಮಮ ಶತ್ರವಃ ।
ಆಧಿವ್ಯಾಧೀ ಚ ನಶ್ಯಂತಿ ಮಹಾಭೀತಿನಿವಾರಣಮ್ ॥
ಪ್ರಥಮೋ ಹನುಮಾನ್ನಾಮಾ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥
ಯತ್ರ ಯತ್ರ ರಘುನಾಥಕೀರ್ತನಂ ತತ್ರ ತತ್ರ ಕೃತಮಸ್ತಕಾಂಜಲಿಮ್ ।
ಬಾಷ್ಪವಾರಿಪರಿಪೂರ್ಣಲೋಚನಂ ಮಾರುತಿಂ ಸ್ಮರತ ರಾಕ್ಷಸಾಂತಕಮ್ ॥

ಪದ್ಮರಾಗಮಣಿಕುಂಡಲತ್ವಿಷಾ ಪಾಟಲೀಕೃತಕಪೋಲಮಂಡಲಮ್ ।
ದಿವ್ಯದೇಹಕದಲೀನಿವಾಸಿನಂ ಭಾವಯಾಮಿ ಪವಮಾನನಂದನಮ್ ॥

## ಮೂಲವಾಯುಧ್ಯಾನಮ್

ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃಪ್ರಸಿದ್ಧಮ್ ।
ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥
ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥
ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ॥
ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥
ಸಕಲಮನೋಽಭೀಷ್ಟಸಿದ್ಧ್ಯರ್ಥೇ ವಾಯುಸ್ತುತಿಪುರಶ್ಚರಣಮಂತ್ರಜಪಂ ಕರಿಷ್ಯೇ ॥

## ಪುರಶ್ಚರಣ ಪ್ರಕಾರಗಳು

ಇಲ್ಲಿ ವಾಯುಸ್ತುತಿಯ ಪುರಶ್ಚರಣಕ್ರಮಗಳನ್ನು ತಿಳಿಸುವ ಪ್ರಯತ್ನ ಮಾಡಲಾಗುತ್ತದೆ. ಪುರಶ್ಚರಣಗಳ ಬಗ್ಗೆ ಖಚಿತವಾದ ಮಾಹಿತಿಗಳು ಸಿಗದೇ ಇದ್ದರೂ ಯತಿವರೇಣ್ಯರು,ವಿದ್ವಾಂಸರು,ಸದ್ಗ್ರಹಸ್ಥರು ಅನುಷ್ಠಾನ ಮಾಡುತ್ತಾ ಬಂದ ಕೆಲವು ಕ್ರಮಗಳು ಹೀಗಿವೆ.

1. ಮೊದಲು ನಖಸ್ತುತಿಯನ್ನು ಪಠಿಸಿ ಅನಂತರ ವಾಯುಸ್ತುತಿಯ ಅಭೀಷ್ಟಪದ್ಯವನ್ನಾರಂಭಿಸಿ ಕೊನೆಯವರೆಗೆ ಹೇಳಬೇಕು. ಮತ್ತೆ ವಾಯುಸ್ತುತಿಯ ಆರಂಭದಿಂದ ಕೊನೆಯವರೆಗೆ ಹೇಳಿ ನಖಸ್ತುತಿಯನ್ನು ಪಠಿಸಬೇಕು. ಇದು ವ್ಯಾಸರಾಜರ ಕ್ರಮ ಎನ್ನಲಾಗಿದೆ.

2. ಮೊದಲು ನಖಸ್ತುತಿಯನ್ನು ಹೇಳಿ ಅನಂತರ ವಾಯುಸ್ತುತಿಯನ್ನು ಆರಂಭದಿಂದ ಕೊನೆಯವರೆಗೆ ಹೇಳಬೇಕು. ಅನಂತರ ಅಭೀಷ್ಟ ಪದ್ಯದಿಂದಾರಂಭಿಸಿ ವಾಯುಸ್ತುತಿ ಪೂರ್ತಿಗೊಳಿಸಬೇಕು. ಪುನಃ ವಾಯುಸ್ತುತಿಯನ್ನು ಮೊದಲಿನಿಂದ ಕೊನೆಯವರೆಗೆ ಹೇಳಿ ನಖಸ್ತುತಿಯನ್ನು ಪಠಿಸಬೇಕು. ಇದು ವಾದಿರಾಜರ ಪದ್ಧತಿ ಎನ್ನುವದು ಕೆಲವರ ಅಭಿಪ್ರಾಯ.

ಈ ಮೇಲಿನ ಎರಡೂ ಒಂದಾವರ್ತಿ ಪುರಶ್ಚರಣವೆನಿಸಿದೆ. ಇದನ್ನು ಒಂದು ದಿನದಲ್ಲಿ ಏಳು ಬಾರಿ ಮಾಡುವದು ಉತ್ತಮ ಎಂದೂ ಐದು ಬಾರಿ ಮಧ್ಯಮ ಎಂತಲೂ ಸಂಪ್ರದಾಯವಿದೆ. ಕನಿಷ್ಠ ಮೂರು ಬಾರಿಯಾದರೂ ನಡೆಸಬೇಕು.

ಹೀಗೆ ಏಳು ದಿನಗಳ ಕಾಲ ಪುರಶ್ಚರಣ ನಡೆಯಬೇಕು. ಐದು ದಿನವಾಗಲಿ ಮೂರುದಿನ ವಾಗಲಿ ನಡೆಸುವದುಂಟು. ಅನಂತರ ಪುರಶ್ಚರಣ ಅಂಗವಾಗಿ ವಾಯುಸ್ತುತಿಹೋಮವನ್ನು ಮಾಡುತ್ತಾರೆ.

